ಕುರಿಕಾಯುವವನೊಬ್ಬನಿಗೆ ನಾಲ್ಕು ಜನ ಮಕ್ಕಳಿದ್ದರು. ಅದರಲ್ಲಿ ಒಬ್ಬ ಮಗನು ಕುಂಟನು. ಶ್ರೀಶೈಲಮಠಕ್ಕೆ ಹೋದರು. ದೇವರ ದರ್ಶನ ನಂತರ ದೇವರ ಪೂಜೆ ಮಾಡುತ್ತಾ, ನೀನು ಇಲ್ಲಿಯೇ ಇರು. ನಿನಗೆ ವರ್ಷಕ್ಕೆ ಬಟ್ಟೆ ಕಾಳುಕಡಿ, ಅಕ್ಕಿ ತಂದು ಕೊಡುತ್ತೇವೆ ಎಂದು ಕುಂಟುಮಗನಿಗೆ ಹೇಳಿ ಹೋದರು. ಕುಂಟನು ಪೂಜೆ ಮಾಡುತ್ತಾ ಭಿಕ್ಷೆ ಎತ್ತುತ್ತಾ ದೇವರಿಗೆ ಪ್ರಸಾದ ಮಾಡುತ್ತಾ ಇದ್ದನು. ದೇವರ ಕೃಪೆಯಂತೆ ನೀನು ಭಿಕ್ಷೆ ಬೇಡುತ್ತಾ ಜೀವನ ಸಾಗಿಸು ನಿನ್ನ ಭಕ್ತಿಗೆ ಮೆಚ್ಚಿದ್ದೇನೆ ಎಂದು ಆಕಾಶವಾಣಿ ಆಯಿತು. ಅಲ್ಲಿಂದ ಈ ವರೆಗೂ ಕುಂಟನಿಗೆ ಹೆಳವ ಎಂದು ಕರೆಯಲಾಉಗತ್ತಿದೆ. ಮುಂದೆ ಇದೇ ಹೆಳವ ಜಾತಿ ಆಗಿ ಪರಿಣಮಿಸಿತು. ಬಳ್ಳಾರಿಯ ಮಲ್ಲೇಶಪ್ಪ ಹೆಳವರ, ಸುಂಕಪ್ಪ ಹೆಳವರನ್ನು ಸಂದರ್ಶಿಸಿದಾಗ ತಿಳಿಸಿದರು.

ಈ ಭೃಂಗೇಶ್ವರನಿಂದ ಹೆಳವ ಪರಂಪರೆ ಬೆಳೆಯಿತು. ಈತ ಹೆಳವರ ಮೂಲ ಪುರುಷನೆಂದು ಐತಿಹ್ಯವಿದೆ. ಈ ಕಥೆಗಳಿಂದ ಹೆಳವರ ಮೂಲ ಪುರುಷ ಕುಂಟನಿದ್ದ ನೆಂದು ತಿಳಿದುಬರುತ್ತದೆ.

**ಬಸವಣ್ಣನ ಕಾಲದ ಹೆಳವರು**

೧. ಕಲ್ಯಾಣಪುರಿ ಪಟ್ಟಣದಲ್ಲಿ ಊನಾದ ಕಾಲುಳ್ಳ ಭೃಂಗೇಶ್ವರನು ಭಿಕ್ಷೆಬೇಡಿ ಜೀವಿಸುತ್ತಿದ್ದ. ಆಗ ರಾಜನಾಗಿದ್ದ ಬಿಜ್ಜಳ, ಮಂತ್ರಿಯಾದ ಶಿವಚಾರದ ಬಸವಣ್ಣ, ತನ್ನ ರಾಜ್ಯದಲ್ಲಿ ಶಿವಾಚಾರದ ನೆಲೆಗಟ್ಟು ಮಾಡಬೇಕೆಂದು ಬಸವಣ್ಣನ ಹಿರಿದಾಶೆ. ಕಾಲಿಲ್ಲದ ಹೆಳವನನ್ನು ಕರೆದು ನೀನು ಕುಂಟನಿರುವಿ ನಾನು ಕೊಟ್ಟ ನಂದಿ ಹತ್ತಿಕೊಂಡು ಭಿಕ್ಷೆಮಾಡಿ ಜೀವಿಸಿಕೊಂಡಿರು. ಎತ್ತಿನ ಕೊರಳಿಗೆ ಬಸವಣ್ಣ ಗಂಟೆ ಕಟ್ಟಿದ. ಓಂ ಶಿವಾ ಓಂ ಶಿವಾ ಎಂಬ ನಾದ ಗಂಟೆಯಿಂದ ಹೊರಬಂತು. ಹೆಳವನು ವಂಶಾವಳಿ, ಕುಲ, ಬೆಡಗು ಹೇಳತೊಡಗಿದನು. ಕಲ್ಯಾಣದಲ್ಲಿ ಶಿವಾಚಾರ ಹೆಚ್ಚಾಯಿತು. ಬಿಜ್ಜಳನಿಗೆ ಇದರಿಂದ ಚಿಂತೆ ಆಯಿತು. ಶಿವ ಶಿವ ಅಂದವನ ನಾಲಿಗೆ ಕೊಯ್ಯಬೇಕು. ವಿಭೂತಿ ಧರಿಸಿದವನ ಹಣೆ ಕೆತ್ತಬೇಕು ಎಂದು ಆಜ್ಞೆಮಾಡಿದ. ಮುಂದೆ ಕಲ್ಯಾಣಪುರಿ ಹಾಳಾಯಿತು. ಎಲ್ಲ ಜಾತಿಯವರೂ ಬೇರೆ ಬೇರೆ ಕಡೆ ಹೊರಟರು. ಆದರೆ ಹೆಳವ ಮಾತ್ರ ಅಲ್ಲಿಯೇ ಉಳಿದ. ಹೆಳವನಿಗೆ ಪರಮೇಶ್ವರ ಪ್ರತ್ಯಕ್ಷನಾಗಿ ಹೆಳವನ ನಾಲಿಗೆಯ ಮೇಲೆ ನಾಲ್ಕಕ್ಷರ ಬರೆದು ನಿನ್ನ ಬಾಯಲ್ಲಿ ಏನು ವಚನ ಬರುತ್ತದೆ ಅದು ಸುಳ್ಳಾಗಬಾರದು ಎಂದು ಹೇಳಿದ. ಅದರಂತೆ ಹೆಳವ ಎತ್ತಿನ ಮೇಲೆ ಕುಳಿತು ಹೊರಟ. ಕಲ್ಯಾಣಪುರಿ ಬಿಟ್ಟು ಬೇರೆ ಬೇರೆ ಊರುಗಳಲ್ಲಿ ನೆಲೆಸಿದವರಲ್ಲಿ ಹೋಗಿ ನೀವು ಕಲ್ಯಾಣಪುರಿಯಿಂದ ಬಂದೋರು ನಿಮ್ಮ ತಾತ ಮುತ್ತಾತರು ಇಂತಾವ್ರು ನಿಮ್ಮ ಬೆಡಗು ಇಂಥಾದ್ದು ಹೀಗೆ ಹೇಳುತ್ತ ಎಲ್ಲರನ್ನು ಸಂತೋಷಪಡಿಸಿದ. ಅವರು ಅವನಿಗೆ ಹತ್ತಲು ಎತ್ತು, ಉಡುವುದಕ್ಕೆ ಬಟ್ಟೆ ಕೊಟ್ಟರು. ಈ ಹೆಳವನಿಂದಲೇ ಹೆಳವ ಸಂತತಿ ಮುಂದುವರಿಯಿತು.

೨. ಬಸವಣ್ಣನವರ ಕಾಲದಲ್ಲಿಯೇ ಹೆಳವ ಜಾತಿ ಉದ್ಭವಿಸಿತು. ಅವರು ರಾಜ್ಯದಲ್ಲಿಯ ಹಳ್ಳಿಗಳಲ್ಲಿ ಇದ್ದ ಜನರ ಜನನ ಮರಣ ದಾಖಲೆಗಳನ್ನು, ಬೇರೆ ಸ್ಥಳಗಳಿಂದ ತಮ್ಮ

ರಾಜ್ಯಕ್ಕೆ ಬಂದ ಜನರನ್ನು ತಿಳಿದುಕೊಳ್ಳುವುದಕ್ಕೂ ಮತ್ತು ಸಂಬಂಧ ಬೆಳೆಸುವ ಜನರನ್ನು ಕಂಡುಹಿಡಿಯುವುದಕ್ಕೂ ಕೆಲವು ಜನರನ್ನು ನೇಮಿಸಿ ಇಂತಿಂಥ ಹಳ್ಳಿಗಳೆಂದು ಅವರಿಗೆ ವಹಿಸಿದ್ದರು. ಆ ಹಳ್ಳಿಗಳಿಗೆ ಹೋಗಲು ಅನುಕೂಲವಾಗಲೆಂದು ಮಾತ್ರ ಎತ್ತುಗಳನ್ನು ಒದಗಿಸಿದರು. ಈ ಎತ್ತುಗಳ ಮೇಲೆ ಮನೆ ಮನೆಗೆ ಹೋಗಿ ವಹಿಸಿದ ಕಾಯಕ ಮಾಡುತ್ತಿದ್ದವರಿಗೆ ಹೇಳವರು ಎಂದು ಹೆಸರಿಟ್ಟರು. ಬಸವಣ್ಣನವರು ಕೆಲವು ಕುಂಟರನ್ನು ಈ ಕಾರ್ಯಕ್ಕೆ ನೇಮಿಸಿದ್ದರಿಂದ ಅವರ ವಂಶಜರೆಲ್ಲರೂ ಹೆಳವ ಸಮುದಾಯದವರೆಂದು ಮುಂದುವರೆದರು.

೩. ೧೨ನೇ ಶತಮಾನದಲ್ಲಿ ಅಣ್ಣ ಬಸವಣ್ಣನವರು ನುಡಿದ ವಚನದಲ್ಲಿ ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ... ಹೆಳವ ಇರುವುದಕ್ಕೆ ಇದು ಆಧಾರವಾಗಿದೆ.

೪. ಕನ್ನಡ ಹೆಳವರು (ಹೆಳವಯ್ಯಗಳು ವಂಶಾವಳಿಯನ್ನು ಹೇಳುವ ಅಯ್ಯಗಳು) ತಮ್ಮ ಬೆಡಗು ಹೇಳುವಾಗ ತಮ್ಮ ಗುರುಸ್ಥಳ ಪೀಠಿಕೆಯನ್ನು ಹೇಳುವರಲ್ಲದೆ ಅವರಲ್ಲಿ ತಮ್ಮಲ್ಲಿಯ ಎರಡು ಬಣಗಳನ್ನು ಹೇಳುವ ವಾಡಿಕೆ ಇದೆ. ೧. ನಂದಿಬಣ ೨. ಗರುಡ ಬಣ. ಈ ನಂದಿ ಬಣದವರೇ ನಂದಿ ಸಂಬಾಳದ ಹಾಗೂ ಕೌಲೆತ್ತಿನಯ್ಯಗಳಾಗಿದ್ದಾರೆ. ಗರುಡಬಣದವರೇ ಮನೆ ಮನೆಗೆ ಅಲೆದಾಡಿ ವಂಶಾವಳಿಯನ್ನು ಸಾರುವ ಹೇಳುವಯ್ಯ ಗಳಾಗಿದ್ದಾರೆ.

೫. ಮೈಸೂರು ಸಂಸ್ಥಾನ ಮಹಾರಾಜರ ಕಾಲದಲ್ಲಿ ಪ್ರತಿನಿತ್ಯ ಅರಮನೆ ಎದುರು ಪ್ರಾತಃಕಾಲದಲ್ಲಿ ಎತ್ತಿನ ಮೇಲೆ ಕುಳಿತು ಹೆಳವ ಹೊಗಳುತ್ತಿದ್ದ ಪರಿಪಾಠವಿತ್ತು. ಅವರ ಅರಮನೆಯ ಒಳಭಾಗದಲ್ಲಿ ಇವನ ತೈಲವರ್ಣದ ಚಿತ್ರಗಳಲ್ಲಿ ಪ್ರಪ್ರಥಮ ಇರುವುದು ಎತ್ತಿನ ಮೇಲೆ ಕುಳಿತ ಹೆಳವನದು.

ಇಲ್ಲಿ ಇನ್ನೊಂದು ಮುಖ್ಯ ಅಂಶವೇನೆಂದರೆ ಹಳೆ ಮೈಸೂರಿನ ಒಕ್ಕಲಿಗ ಜಾತಿಗೆ ಸೇರಿದ ಹೆಳವ ತೆಲುಗು ಭಾಷೆಯ ಮಹಿಳೆಯನ್ನು ವಿವಾಹವಾದುದರಿಂದ ಸದರಿ ಹೆಳವನಿಗೆ ಅಂತರ್ ಜಾತಿ ವಿವಾಹದ ಪರಿಣಾಮವಾಗಿ ಬೇರೆ ಜಾತಿಯೇ ಇಲ್ಲದಂತಾಗಿ ಅವನ ಅಂಗವಿಕಲತೆಯೇ ಜಾತಿಯಾಗಿ ಪರಿಣಮಿಸಿತು. ಇದನ್ನು ಪುಷ್ಠೀಕರಿಸುವಂತೆ ಹಳೆ ಮೈಸೂರು ಭಾಗದಲ್ಲಿ ಇರುವಂತಹ ಹೆಳವನ ಮಾತೃಭಾಷೆ ತೆಲುಗು ಆಗಿದೆ. ಬಹುಶಃ ಮೆಲ್ಕಂಡ ಹೆಳವನ ಹೆಂಡತಿ ತೆಲುಗು ಭಾಷೆಯವಳಾಗಿದ್ದರಿಂದ ಮಾತೃಭಾಷೆ ಯಾಗಿ ಮುಂದುವರಿದರಬಹುದು. ಆದರೆ ತೆಲುಗು ನಾಡಿನಿಂದ ಹೆಳವರು ಬಂದಿರುವ ಬಗ್ಗೆ ಯಾವ ಪುರಾವೆಗಳು ಇಲ್ಲ.

ಹೆಳವರ ಹುಟ್ಟಿನ ಬಗ್ಗೆ ವಿಶೇಷವಾದ ಜನಪದ ಪ್ರತೀತಿ ಇದೆ. ಹನ್ನೆರಡನೇ ಶತಮಾನದ ಪ್ರಾರಂಭದಲ್ಲಿ ವಿಶ್ವಗುರು ಬಸವಣ್ಣನವರು ತ್ರಿದಾಸೋಹಗಳಲ್ಲಿ ಒಂದಾದ ಕಾಯಕವೇ ಕೈಲಾಸ ಎಂಬ ಮೂಲತತ್ವಗಳನ್ನು ಶರಣರಲ್ಲಿ ಪ್ರಚಾರಪಡಿಸಿದರು. ಕಾಯಕ ಮಾಡಿದವನಿಗೆ ಉಣ್ಣುವ ಹಕ್ಕು ಇದೆ ಎಂಬ ಮೂಲತತ್ವದಂತೆ ಶರಣರೆಲ್ಲರೂ ಕಾಯಕ ಮಾಡಿ ಊಟ ಮಾಡುತ್ತಿದ್ದರು.

ಶಿವಶರಣರಲ್ಲೊಬ್ಬನಾದ ಕುಂಟನಿಗೆ ಅರ್ಥಾತ್ ಹೆಳವನಿಗೆ ಆಗಿನ ಕಾಲದಲ್ಲಿ ಕಾಯಕ ಮಾಡುವ ಯಾವ ಅವಕಾಶಗಳೂ ಇರಲಿಲ್ಲ. ಉಣ್ಣುವ ಹಕ್ಕಿಲ್ಲವೆಂದು ಉಪವಾಸದಿಂದ ಇರುತ್ತಿದ್ದನು. ಈ ವಿಚಾರ ಮಾನವತಾವಾದಿ ಅಣ್ಣ ಬಸವಣ್ಣನವರ ಗಮನಕ್ಕೆ ಬಂದು ಆ ಶರಣ ಹೆಳವನ ನಿಷ್ಠೆಗೆ ಮೆಚ್ಚಿ ಹೆಳವನಿಗೂ ಕಾಯಕ ಕಲ್ಪಿಸಿ ಕೊಟ್ಟರು.

ಬಸವಣ್ಣನವರು ಭಕ್ತಿ ಭಂಡಾರಿ ಅಷ್ಟೇ ಅಲ್ಲದೆ ಸಾಮಾಜಿಕ ಅಭಿವೃದ್ಧಿಯ ಬಗ್ಗೆ ಕಾಳಜಿ ಉಳ್ಳವರಾಗಿದ್ದರು. ಅದಕ್ಕೆ ಈಗಿರುವ ಜನಗಣತಿ ಬಗ್ಗೆ ಆವಾಗಲೇ ತಿಳಿದು ಕೊಂಡಿದ್ದರು. ಅದನ್ನು ಈ ಹೆಳವನ ಮುಖಾಂತರ ಜಾರಿಗೊಳಿಸಿದರು. ಹೆಳವನಿಗೆ ಶರಣರ ಮನೆಗಳಿಗೆ ಹೋಗಿ ಅವರ ಮನೆಯಲ್ಲಿರುವ ಜನರ ಹೆಸರುಗಳು, ಸಂಬಂಧಗಳು, ಜನಸಂಖ್ಯೆ, ಆರ್ಥಿಕ ಸ್ಥಾನಮಾನಗಳು, ಸಾಮಾಜಿಕ ಸ್ಥಾನಮಾನಗಳ ಬಗ್ಗೆ ಅಂಕಿ ಸಂಖ್ಯೆಗಳ ಸಂಗ್ರಹ ಮಾಡಿ ತಮಗೆ ಒಪ್ಪಿಸಬೇಕೆಂದು ಕುಂಟ ಹೇಳವನನ್ನು ಈ ಕಾಯಕಕ್ಕೆ ನಿಯಮಿಸಿದರು. ಅವನಿಗೆ ಹಳ್ಳಿ ಹಳ್ಳಿಗೆ ಹೋಗಲು ಅನುಕೂಲಕ್ಕಾಗಿ ಅವರ ಪ್ರೀತಿಯ ವಾಹನವಾದ ನಂದಿಯ ಮೇಲೆ ಕುಳಿತುಕೊಂಡು ಹೋಗುವ ಅವಕಾಶವನ್ನು ಮಾಡಿಕೊಟ್ಟರು.

ಇಲ್ಲಿ ಮುಖ್ಯವಾಗಿ ನೆನಪಿಡುವ ಸಂಗತಿ ಏನೆಂದರೆ ಅಂದಿನಿಂದ ಈವರೆಗೂ ಸಹ ಉತ್ತರ ಕರ್ನಾಟಕದ ಯಾವುದೇ ಹಳ್ಳಿಯಲ್ಲಿ ಎತ್ತಿನ ಮೇಲೆ ಕುಳಿತುಕೊಂಡು ಗ್ರಾಮದಲ್ಲಿ ಪ್ರವೇಶಿಸಲು ಹೆಳವರ ಹೊರತಾಗಿ ಬೇರೆ ಯಾರನ್ನೂ ಗ್ರಾಮ ಪ್ರವೇಶಕ್ಕೆ ಬಿಡುವುದಿಲ್ಲ. ಇದನ್ನು ಪುಷ್ಟೀಕರಿಸಲು ಬಿಜಾಪುರ ಜಿಲ್ಲೆಯಲ್ಲಿ ಸುಮಾರು ಐದುನೂರು ದೊಡ್ಡ ಕುಟುಂಬದ ವಂಶಾವಳಿಯು ೧೧೨೬ ರಿಂದ ಈ ಹಿಂದಿನ ಕೆಲವು ವರ್ಷಗಳ ವರೆಗೆ ಕರಾರುವಕ್ಕಾಗಿ ಬರೆದ ವಂಶಾವಳಿ ನಮೂದಿಸಿದ ಕಡತಗಳಿವೆ. ಅವುಗಳಿಗೆ ಚಿಪ್ಪೋಡುಳೆಂದು ಕರೆಯುತ್ತಾರೆ. ಅಂತಹ ದಾಖಲೆಗಳು ನೂರಾರು ವರ್ಷಗಳಿಂದ ಕುಟುಂಬಗಳ ವಂಶಾವಳಿಗಳನ್ನು ಚಾಚೂ ತಪ್ಪದೇ ಬರೆದುಕೊಂಡು ಬಂದದ್ದರಿಂದ ವಾರಸುದಾರಿಕೆ ತೀರ್ಮಾನಿಸಲು ಭಾರತದ ಮುಖ್ಯ ಸರ್ವೋನ್ನತ ನ್ಯಾಯಾಲಯವು ಸಹಿತ ಇವುಗಳನ್ನು ಪುರಾವೆಗಳೆಂದು ಪರಿಗಣಿಸಿವೆ.

ಹೆಳವರು ಬರೆದ ವಂಶಾವಳಿಗಳು ಅತ್ಯಮೂಲ್ಯ ದಾಖಲೆಗಳಾಗಿವೆ. ಕೇವಲ ಓದಲು ಬರೆಯಲು ಕಲಿತ ಹೆಳವ ಸಮುದಾಯದವರು ಸೃಷ್ಟಿಸಿದ ಕುಟುಂಬದ ವಂಶಾವಳಿಗಳು ಕುಟುಂಬದ ಕೀರ್ತಿಯನ್ನು ಹೆಚ್ಚಿಸಿವೆ. ಹೀಗಾಗಿ ಹೆಳವರು ಮನೆಗೆ ಬಂದರೆ ತಮ್ಮ ಮನೆಗೆ ಮಗಳು ಬಂದಳೆಂದು ಪ್ರೀತಿಯಿಂದ ಆದರಿಸಿ, ಗೌರವಿಸಿ ತಮ್ಮ ಕುಟುಂಬದ ವಂಶಾವಳಿ ಬರೆಯಿಸಿ ಊಟ ಉಡಿಗೆ ನೀಡುತ್ತಾರೆ ಮತ್ತು ಮನೆಯಲ್ಲಿರುವ ಹಸು ಕರುಗಳನ್ನು ದಾನವಾಗಿ ಕೊಡುತ್ತಾರೆ. ಒಕ್ಕಲು ಕುಟುಂಬಗಳಲ್ಲಿ ಮದುವೆ ಮುಂಜಿ ಸಮಾರಂಭಗಳಿಗೆ ಇವರನ್ನು ಕರೆಯಿಸಿ ಹೊಸ ಬಟ್ಟೆ ಬರೆ ಕೊಟ್ಟು ಗೌರವಿಸುತ್ತಾರೆ. ಒಕ್ಕಲು ಕುಟುಂಬಗಳು ಮತ್ತು ಹೆಳವರಿಗೆ ಇರುವ ಸಂಬಂಧ

ತಾಯಿ ಮಕ್ಕಳ ಸಂಬಂಧವೆಂದೇ ಪರಿಗಣಿಸಲಾಗುತ್ತದೆ. ಅಲ್ಲದೆ ಒಕ್ಕಲು ಮನೆಯವರು ದಾನರೂಪ ನೀಡಿದ ಕಾಣಿಕೆಗಳನ್ನು ದಾಖಲಿಸಿಕೊಳ್ಳುತ್ತಾರೆ. ಹಿರಿಯರು ನೀಡಿದ ದಾನದ ವಿಚಾರವನ್ನು ಒಕ್ಕಲು ಮನೆ ಪೀಳಿಗೆಯವರಿಗೆ ಹೆಳವರು ನೆನಪಿನಿಂದ ಹೇಳುವ ಪರಿಪಾಠ ಇದೆ.

**ಶ್ರೀ ಯಾದಿ ವಂಶಾವಳಿ ಕಂಚಿನ ಪತ್ರ ನಕಲು**

ಇವರು ಕುಲದಲ್ಲಿ ಪಂಚಮಶಾಲಿ ಬೆಡಗು ಹೊನ್ನಕೋರೆನವರು ಗುರುಗಳು ಮಾಮದಾಪೂರ ಪಟ್ಟದ ಸ್ವಾಮಿ, ಮನಿದೇವರು ಮದನಭಾವಿ ಬಸವಣ್ಣ, ಪೂರ್ವಿಸ್ಥಳ ಬಿದರಿಕೋಟಿ ಗೌಡ್ಕಿ ಬಿಟ್ಟು ಕವಲಗೇರಿಗೆ ಬಂದರು. ಅಲ್ಲಿ ಮೊನ್ನ ಬಸಪ್ಪನವರು ವಂಶಾವಳಿ.

ಧಾರವಾಡ ತಾಲ್ಲೂಕು ಕವಲಗೇರಿಯಲ್ಲಿ
ಹಂಚಿಮನಿಯವರ ವಂಶಾವಳಿ
ಮೂಲಪುರುಷ
ಮೊನ್ನಬಸಪ್ಪಾ



ಮಹಾದೇವಪ್ಪ ಉರ್ಫ್ ಧಾರವಾಡದಿಂದ ದತ್ತಕ ಬಂದ

ತಿಪ್ಪಣ್ಣ ಹೆಂ. ಗೌರವ್ವ

ಬಸಪ್ಪ ಶಿವಪುತ್ರಪ್ಪ ತಿರಕಪ್ಪ ಕಲ್ಲಪ್ಪ

**ಮಾಹಿತಿ:** ಶಿದ್ರಾಮಪ್ಪ ಫಕೀರಪ್ಪ ಇಮ್ಮಡಿ ಹೆಳವರ, ನಾಗಶೆಟ್ಟಿ ಕೊಪ್ಪ ತಾಲ್ಲೂಕು. ಹಳಿಯಾಳ, ಕಾರವಾರ ಜಿಲ್ಲೆ.

ಸದ್ಯದ ಜಾಗತೀಕರಣ ವ್ಯವಸ್ಥೆಯಲ್ಲಿ ಸಹ ಈ ಸಂಬಂಧ ಉಳಿಸಿಕೊಂಡು ಬಂದಿರುವುದು ಒಂದು ಪವಾಡವೇ ಆಗಿದೆ.

ಮೈಸೂರು ಸಂಸ್ಥಾನ ಮಹಾರಾಜರ ಕಾಲದಲ್ಲಿ ಪ್ರತಿನಿತ್ಯ ಅರಮನೆ ಎದುರು ಪ್ರಾತಃಕಾಲದಲ್ಲಿ ಎತ್ತಿನ ಮೇಲೆ ಕುಳಿತು ಹೆಳವ ಹೊಗಳುತ್ತಿದ್ದ ಪರಿಪಾಠವಿತ್ತು. ಇದು ಹೆಳವನಿಗೆ ಸಲ್ಲುತ್ತಿದ್ದ ಗೌರವವೂ ಆಗಿದೆ.

ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕು ಕಾಗಿನೆಲೆಯಲ್ಲಿ ಕನಕದಾಸರು ಕಟ್ಟಿಸಿದ ಆದಿಕೇಶವ ದೇವಾಲಯವಿದೆ. ಈ ದೇವಾಲಯಕ್ಕೆ ಉಂಬಳಿ ಜಮೀನುಗಳಿವೆ. ಕನಕ ದಾಸರ ಕಾಲದಿಂದಲೂ ಈವರೆಗೆ ಆದಿಕೇಶವ ದೇವರ ಪಾಲಕಿ ಉತ್ಸವ ಹೊರಡುವಾಗ ಪ್ರಥಮವಾಗಿ ಹೆಳವ ಪಾಲಕಿ ಮುಟ್ಟಿ ದೇವರಿಗೆ ನಮಸ್ಕರಿಸಿ ಪೂಜಿಸಿದ ಮೇಲೆಯೇ ಪಾಲಕಿ ಮುಂದೆ ಹೋಗುವ ಸಂಪ್ರದಾಯ ಈಗಲೂ ಮುಂದುವರಿದಿದೆ. ಇಲ್ಲಿ ಹೆಳವರಿಗೆ ಉಂಬಳಿ ಜಮೀನು ಸಹ ನೀಡಲಾಗಿದೆ.

ಗುಜರಾತಿನಲ್ಲಿ ಹೆಳವರನ್ನು ಹೋಲುವ ಸಮುದಾಯವೊಂದಿದ್ದು ಅದನ್ನು ಬಾರೋಟರೆಂದು ಕರೆಯಲಾಗುತ್ತದೆ.

ಬಾರೋಟರು ಕನೂಜ್ ಮತ್ತು ಮಾರವಾರದಿಂದ ಉತ್ತರ ಗುಜರಾತ ಕಡೆ ವಲಸೆ ಬಂದವರಾಗಿದ್ದಾರೆ. ಇವರನ್ನು ಮಲನಸಿ ಬಾರೋಟ. ರಾಜ ಬಾರೋಟ ಎಂದು ಕರೆಯುತ್ತಾರೆ. ಇವರು ಆರುಹಳ್ಳಿ, ಹನ್ನೆರಡು ಹಳ್ಳಿ, ಇಪ್ಪತ್ತೇಳು ಹಳ್ಳಿಗಳನ್ನು ಗುಂಪುಗಳಾಗಿ ಹಂಚಿಕೊಂಡು ಭಿಕ್ಷೆ ಬೇಡುತ್ತಾರೆ. ಇವರು ಭಾರದ್ವಜ, ಕಶ್ಯಪ, ಪರಾಶರ, ಬರಿಗು ಮತ್ತು ಕಪಿಲರೊಡನೆ ವಿವಾಹ ಸಂಬಂಧ ಬೆಳೆಸಿದ್ದಾರೆ. ಇವರು ತಮ್ಮ ಹೆಸರಿನೊಂದಿಗೆ ಸಿಂಗ್, ಶರ್ಮ, ಕೆಲವು ಸಮಯ ರಾವ್ ಎಂದು ಸಹ ಕರೆದು ಕೊಳ್ಳುತ್ತಾರೆ. ಇವರು ಬ್ರಾಹ್ಮಣ ಮತ್ತು ರಜಪೂತ ಜನರ ಹುಟ್ಟು, ವಿವಾಹ ಮತ್ತು ಸಾವುಗಳನ್ನು ದಾಖಲಿಸುತ್ತಾರೆ. ಇವರಿಗೆ ಸಮಾಜದಲ್ಲಿ ಬ್ರಾಹ್ಮಣರಿಗಿರುವಷ್ಟೆ ಉತ್ತಮ ಸ್ಥಾನಮಾನಗಳಿವೆ. ಇಂದು ಅವರು ವ್ಯಾಪಾರ, ಬ್ಯಾಂಕು, ಸರ್ಕಾರಿ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಹೆಳವರ ಹಾಗೆ ಹುಟ್ಟು, ವಿವಾಹ, ಸಾವುಗಳ ಕುರಿತು ದಾಖಲಿಸಿದರೂ ಕೂಡಾ ಬಾರೋಟ ಮತ್ತು ಹೆಳವರ ನಡುವೆ ಸಾಕಷ್ಟು ವ್ಯಾತ್ಯಾಸಗಳಿರುವುದು ಕಂಡುಬರುತ್ತೆ (ಸಿಂಗ್, ಕೆ ಎಸ್:೧೯೯೮:೩೧೪).

ಕರ್ನಾಟಕ ರಾಜ್ಯದ ೨ನೇ ಹಿಂದುಳಿದ ವರ್ಗಗಳ ಆಯೋಗ ಅರ್ಥಾತ್ ವೆಂಕಟ ಸ್ವಾಮಿ ಆಯೋಗದಲ್ಲಿ ಈ ಕುರಿತು ನಮೂದಿಸಿಲಾಗಿದೆ. ಆಂಧ್ರಪ್ರದೇಶದ ರಾಯದುರ್ಗ, ಅನಂತಪುರ ಇತರೆ ತಾಲ್ಲೂಕುಗಳಲ್ಲಿ ಹೆಳವ ಯೆನಾದಿ ಎಂಬ ಹೆಸರಿನಲ್ಲಿ ಜಾತಿ ದೃಢೀಕರಣ ಪತ್ರ ನೀಡಲಾಗುತ್ತಿದೆ. ಹಾಗೆಯೆ ಆ ಭಾಗದ ಹೆಳವರು ಯೆನಾದಿ ಎಂಬ ಹೆಸರಿನಲ್ಲಿ ಪರಿಶಿಷ್ಟ ವರ್ಗದ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಅದರೆ ಕರ್ನಾಟಕದಲ್ಲಿ ಅನುಸೂಚಿತ ಜಾತಿಪಟ್ಟಿಯಲ್ಲಿ ಯೆನಾದಿ ಇಲ್ಲದ್ದರಿಂದ ಆ ಸೌಲಭ್ಯ ಹೆಳವರಿಗೆ ಇಲ್ಲವಾಗಿದೆ.

ಮಹಾರಾಷ್ಟ್ರದಲ್ಲಿ ಹೆಳವ ಸಮುದಾಯವನ್ನು ಅಲೆಮಾರಿ ಸಮುದಾಯವೆಂದು ಪರಿಗಣಿಸಲ್ಪಟ್ಟಿದ್ದು ರಾಜಕೀಯ ಮೀಸಲಾತಿ ಹೊರತಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಇರುವ ಎಲ್ಲಾ ಸೌಲಭ್ಯಗಳನ್ನು ಕೊಡಲಾಗಿದೆ.

ತಮಿಳುನಾಡಿನಲ್ಲಿ ಹೆಳವರು ಕೃಷ್ಣಗಿರಿ ಮತ್ತು ಸೇಲಂ ಮುಂತಾದ ಜಿಲ್ಲೆಗಳಲ್ಲಿ ಕಂಡುಬರುತ್ತಿದ್ದು ಅಲ್ಲಿ ಹೊಳವ ಎಂದು ಅವರನ್ನು ಕರೆಯಲಾಗುತ್ತಿದೆ. ಮೂಲತಃ ಹೊಳವ ಜಾತಿ ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿತ್ತು. ಆದರೆ ಆನಂತರ ಯಾವುದೇ ಕಾರಣವಿಲ್ಲದೆ ಪರಿಶಿಷ್ಟ ವರ್ಗಗಳ ಪಟ್ಟಿಯಿಂದ ಕೈ ಬಿಡಲಾಗಿದೆ .

ಹಳೇ ಮೈಸೂರು ಭಾಗದಲ್ಲಿ ಜಸ್ಟಿಸ್ ಮಿಲರ್ ಆಯೋಗದ ವರದಿಯ ಮೇಲೆ ಡಿಪ್ರೆಸ್ಡ್‌ಕ್ಲಾಸ್ ಎಂಬ ಪಟ್ಟಿಯನ್ನು ತಯಾರು ಮಾಡಲಾಗಿತ್ತು. ಆದರೆ ಅಲ್ಲಿಯೂ ಸಹ ಈ ಜಾತಿಯ ಬಗ್ಗೆ ಯಾರೂ ಹೇಳದ್ದರಿಂದ ಡಿಪ್ರೆಸ್ಡ್‌ಕ್ಲಾಸ್ ಪಟ್ಟಿಯಲ್ಲಿ ಸೇರದೇ ಹೋಯಿತು. ಹೀಗಾಗಿ ಎಲ್ಲ ಸೌಲಭ್ಯಗಳಿಂದ ವಂಚಿತವಾಯಿತು.

ಡಾ ನಾಗನಗೌಡ ಸಮಿತಿಯವರು ಸಲ್ಲಿಸಿದ ಅತೀ ಹಿಂದುಳಿದ ಪಟ್ಟಿಯಲ್ಲಿ ಹೆಳವ ಸಮುದಾಯದ ಪ್ರಸ್ತಾಪವಿದ್ದರೂ ಸಹ ಈ ಸಮುದಾಯದವರಿಗೆ ಯಾವ ಸಹಾಯ ದೊರೆಯಲಿಲ್ಲ. ಆಗಿನ ಸಚಿವರಾಗಿದ್ದ ಬಿ ಬಸವಲಿಂಗಪ್ಪ, ಎನ್ ರಾಚಯ್ಯ ನವರು ಅಲೆಮಾರಿ ಸಮುದಾಯಗಳ ಬಗ್ಗೆ ಯಥಾವತ್ತಾಗಿ ಮಹಾರಾಷ್ಟ್ರದಿಂದ ಅಲೆಮಾರಿ ಸಮುದಾಯಗಳ ಪಟ್ಟಿಯನ್ನು ಇಡೀ ಮೈಸೂರು ರಾಜ್ಯಕ್ಕೆ ಅನ್ವಯಿಸಬೇಕೆಂದು ಪ್ರತಿಪಾದಿಸಿದರು. ನಂತರ ಶ್ರೀಮತಿ ಯಶೋಧರಮ್ಮ ದಾಸಪ್ಪನವರು ಈ ವಿಷಯವನ್ನು ಬಹಳ ಗಂಭೀರವಾಗಿ ಪರಿಗಣಿಸಿ ಅಲೆಮಾರಿ ಸಮುದಾಯಗಳ ಪಟ್ಟಿಯನ್ನು ಜಾರಿಗೆ ತಂದರು. ಮಹಾರಾಷ್ಟ್ರದಲ್ಲಿರತಕ್ಕ ಯೋಜನೆಗಳಿಗಿಂತಲೂ ಹೆಚ್ಚಿನ ಯೋಜನೆಗಳನ್ನು ರೂಪಿಸಿ ಅಲೆಮಾರಿಗಳ ನೆರವಿಗೆ ಬಂದರು. ಈ ಅಲೆಮಾರಿ ಸಮುದಾಯಗಳನ್ನೊಳ ಗೊಂಡ ವಿಮುಕ್ತ ಸಮುದಾಯಗಳು ಹಾಗೂ ಪರಿಶಿಷ್ಟ ವರ್ಗಗಗಳನ್ನು ಸೇರಿಸಿ ಮೈಸೂರಿನಲ್ಲಿ ರಾಷ್ಟ್ರಮಟ್ಟದ ಪ್ರಥಮ ವಿಚಾರಸಂಕೀರ್ಣ ಏರ್ಪಡಿಸಿ ಪ್ರೊ ವಿ ಕೆ ಆರ್ ವಿ ರಾವ್ ರಂತಹ ತಜ್ಞರನ್ನು ಮತ್ತು ಶ್ರೀಮತಿ ಮರುಗತಮ್ ಚಂದ್ರಶೇಖರ ಮುಂತಾದ ಧೀಮಂತ ನಾಯಕರನ್ನು ಕರೆಯಿಸಿದ್ದಲ್ಲದೆ ರಾಷ್ಟ್ರದ ಎಲ್ಲಾ ರಾಜ್ಯಗಳಿಂದ ಸಮಾಜ ವಿಜ್ಞಾನಿಗಳನ್ನು, ಸಂಶೋಧಕ ಚಿಂತಕರನ್ನು ಹಾಗೂ ಸಂಬಂಧಪಟ್ಟ ಇಲಾಖೆಯ

ಅಧಿಕಾರಿ ವರ್ಗವನ್ನು ಕರೆಯಿಸಿ ಮೂರು ದಿನಗಳವರೆಗೆ ಚರ್ಚಿಸಿ ಈ ಸಮುದಾಯಗಳ ಅಭಿವೃದ್ಧಿಗಾಗಿ ಕಾರ್ಯಸೂಚಿಯನ್ನು ಬಿಡುಗಡೆ ಮಾಡಿದರು. ಮುಂದುವರೆದು ರಾಜ್ಯಮಟ್ಟದಲ್ಲಿ ಅಲೆಮಾರಿ ಮತ್ತು ವಿಮುಕ್ತ ಸಮುದಾಯಗಳ ಏಳ್ಗೆಗಾಗಿ ಸಮುದಾಯದ ಮುಖಂಡರನ್ನು ಸೇರಿಸಿ ಮಾನ್ಯ ಸಚಿವೆಯರಾದ ಶ್ರೀಮತಿ ಯಶೋಧರಮ್ಮ ದಾಸಪ್ಪನವರು ತಮ್ಮ ಅಧ್ಯಕ್ಷತೆಯಲ್ಲಿ ಒಂದು ಸಲಹಾ ಸಮಿತಿಯನ್ನು ರಚಿಸಿದರು. ಎಲ್ಲಾ ಅಲೆಮಾರಿ ಸಮುದಾಯಗಳ ಅಭಿವೃದ್ಧಿಗೆ ನೆರವಾದರು. ಅವರಿಗಾಗಿ ವ್ಯವಸಾಯ ಕಾಲೋನಿಗಳು, ಮಹಿಳಾ ಮಕ್ಕಳ ಕಲ್ಯಾಣ ಕೇಂದ್ರಗಳು ಆಶ್ರಮ ಶಾಲೆಗಳನ್ನು ಪ್ರಾರಂಭಿಸಿದರು. ಆರ್ಥಿಕ ಅಭಿವೃದ್ಧಿಗಾಗಿ ಹಸು, ಕುರಿ, ಆಡು, ಹಂದಿ ಮುಂತಾದವುಗಳನ್ನು ಖಾಯಂ ಉದ್ಯೋಗಕ್ಕಾಗಿ ಆರ್ಥಿಕ ನೆರವು ನೀಡಿದರು. ಅಷ್ಟೇ ಅಲ್ಲದೆ ರಾಷ್ಟ್ರಮಟ್ಟದಲ್ಲಿ ಉತ್ತರ ಪ್ರದೇಶದ ಮುಖ್ಯಮಂತ್ರಿಗಳಾದ ಮಾಣಿಕಲಾಲ ವರ್ಮಾ ಅವರು ಸ್ಥಾಪಿಸಿದ ಭಾರತೀಯ **ಘೂಮಂತು** ಜನಸೇವಕ ಸಂಘದ ಮೈಸೂರು ರಾಜ್ಯದ ಸಂಚಾಲಕ ರಾಗಿಯೂ ಸೇವೆ ಸಲ್ಲಿಸಿದರು. ಡಿ ದೇವರಾಜ ಅರಸು ಅವರು ಈ ರಾಜ್ಯದ ಮುಖ್ಯ ಮಂತ್ರಿಗಳಾದ ಮೇಲೆ ರಾಜ್ಯದ ಚಿತ್ರವೇ ಬದಲಾಯಿತು. ಎಲ್ ಜಿ ಹಾವನೂರ ಅವರನ್ನು ಪ್ರಥಮ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರನ್ನಾಗಿ ನಿಯಮಿಸಿದರು. ಸದರಿ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರು ರಾಜ್ಯದ ಉದ್ದಗಲಕ್ಕೂ ತಿರುಗಿ ಯಾರೂ ಕೇಳದ, ಹೇಳದ, ಹೆಸರಿಲ್ಲದ ತೀರಾ ಕೀಳುತನದ ನಿಕೃಷ್ಟ ಜಾತಿಗಳನ್ನು ಸಹಿತ ಪಟ್ಟಿ ಮಾಡಿ ಪ್ರಕಟಿಸಿದರು.

ಆ ಸಮಯದಲ್ಲಿ ಹೆಳವ ಸಮುದಾಯವನ್ನೊಳಗೊಂಡ ಅಲೆಮಾರಿ ಮತ್ತು ವಿಮುಕ್ತ ಸಮುದಾಯಗಳ ಪಟ್ಟಿಯಲ್ಲಿರುವ ಜಾತಿಗಳಿಗೆ ಸಂವಿಧಾನದ ೧೫(೪) ಶಿಕ್ಷಣ ಸೌಲಭ್ಯ ಮತ್ತು ೧೬(೪) ಸರ್ಕಾರಿ ನೌಕರಿಯಲ್ಲಿ ಮೀಸಲಾತಿ ಕೊಡಿಸುವ ಉದ್ದೇಶದಿಂದ ಅಲೆಮಾರಿ ಸಮುದಾಯಗಳು ಮತ್ತು ವಿಮುಕ್ತಿ ಸಮುದಾಯಗಳು ಸೇರಿಸಿ ಹಿಂದುಳಿದ ಬುಡಕಟ್ಟುಗಳೆಂದು ತಮ್ಮದೇ ಆದ ಒಂದು ಹೆಸರಿಟ್ಟು ಶೇ. ೪ ರಷ್ಟು ಮೀಸಲಾತಿಯನ್ನು ಪ್ರಕಟಪಡಿಸಿದರು. ನಂತರವೂ ಸಹ ವಿಶೇಷ ಯೋಜನೆ ಅಡಿಯಲ್ಲಿ ಅಲೆಮಾರಿ ಮತ್ತು ವಿಮುಕ್ತ ಸಮುದಾಯಗಳಿಗೆ ಮುಂದುವರಿದು, ಹಿಂದುಳಿದ ವರ್ಗಗಳ ವರ್ಗೀಕರಣದಲ್ಲಿ ಬಿರುಗಾಳಿ ಬೀಸಿದಂತೆ ಆಗ ಸಂವಿಧಾನದ ತಿದ್ದುಪಡಿ ಅಡಿಯಲ್ಲಿ ಮುಂಬಯಿ ಮತ್ತು ಹೈದರಾಬಾದ್ ಕರ್ನಾಟಕದಲ್ಲಿರತಕ್ಕಂತಹ ವಿಮುಕ್ತ ಸಮುದಾಯಗಳ ಪಟ್ಟಿಯಲ್ಲಿದ್ದ ಭೋವಿ, ಬಣಜಾರ, ಕೊರಮ, ಕೊರಚ ಜಾತಿಗಳು ಹಳೆ ಮೈಸೂರಿನಲ್ಲಿ ಪರಿಶಿಷ್ಟ ಜಾತಿಯಲ್ಲಿ ಇದ್ದುದರಿಂದ ಇಡೀ ರಾಜ್ಯಕ್ಕೆ ಅನ್ವಯಿಸುವಂತೆ ಸಂವಿಧಾನದ ತಿದ್ದುಪಡಿಯಾಯಿತು. ಅದೇ ಕಾಲಕ್ಕೆ ಸುಡುಗಾಡುಸಿದ್ಧ, ಡೊಂಬ, ಚನ್ನದಾಸರ, ಹಂದಿಜೋಗಿ, ಸಿಳ್ಳೆಕ್ಯಾತ, ಬುಡುಗ ಜಂಗಮ ಜಾತಿಗಳು ಅಲೆಮಾರಿ ಸಮುದಾಯಗಳ ಪಟ್ಟಿಯಿಂದ ಪರಿಶಿಷ್ಟ ಜಾತಿಗಳೆಂದು ಪರಿಗಣಿಸಲ್ಪಟ್ಟವು. ಅಲ್ಲದೆ ೧೯೯೧ರಲ್ಲಿ ಬೇಡ, ವಾಲ್ಮೀಕಿ ಜಾತಿಗಳು ಪರಿಶಿಷ್ಟ ವರ್ಗಕ್ಕೆ ಸೇರಿಸಲ್ಪಟ್ಟವು.

ಆದರೆ ಆ ಪಟ್ಟಿಯಲ್ಲಿ ಹೆಳವ ಸಮುದಾಯಗಳನ್ನೊಳಗೊಂಡ ಈ ಎಲ್ಲ ಸಮುದಾಯಗಳು ದಿಕ್ಕಿಲ್ಲದಂತಾದವು. ಪಟ್ಟಿಯೇ ಮಾಯವಾಯಿತು. ಅ ಗುಂಪು ಹಿಂದುಳಿದ ವರ್ಗಗಳೆಂದು ನಂತರ ಇನ್ನೂ ಕೆಲವು ಜಾತಿಗಳನ್ನು ಸೇರಿಸಿ ಪ್ರವರ್ಗ ೧ ಎಂದು ವರ್ಗೀಕರಿಸಲಾಯಿತು. ಸುಮಾರು ೨೦ ವರ್ಷಗಳಿಂದ ಈ ಸಮುದಾಯಗಳನ್ನು ಕೇಳುವರೇ ಇಲ್ಲದಂತಾಗಿದೆ.

ಇತ್ತೀಚೆಗೆ ರಾಜ್ಯ ಹಿಂದುಳಿದ ವರ್ಗಗಳ ನಿರ್ದೇಶನಾಲಯ ಅಲೆಮಾರಿ ಸಮುದಾಯಗಳ ಹಿಂದಿನ ಪಟ್ಟಿಯನ್ನೇ ಬಿಡುಗಡೆ ಮಾಡಿ ಈ ಸಮುದಾಯಗಳ ಅಭಿವೃದ್ಧಿಗಾಗಿ ಹೊಸ ಹೊಸ ಯೋಜನೆಗಳನ್ನು ರೂಪಿಸಿ ಮಂಜೂರಾತಿಗಾಗಿ ಕೇಂದ್ರ ಸರ್ಕಾರಕ್ಕೆ ಕಳುಹಿಸಿಕೊಡಲಾಗಿದೆ. ಕೆಲವು ಅರ್ಹ ಜಾತಿಗಳನ್ನು ಪರಿಶಿಷ್ಟ ವರ್ಗದ ಪಟ್ಟಿಯಲ್ಲಿ ಸೇರಿಸಲು ಪ್ರಯತ್ನ ಮುಂದುವರಿಸಲಾಗಿದೆ.

## ೨

# ಮೂಲ ಮತ್ತು ಪ್ರಸಾರ

ಅಲೆಮಾರಿ ಹೆಳವ ಸಮುದಾಯದ ಮೂಲವು ಆಂಧ್ರ ಪ್ರದೇಶವಾಗಿರಬೇಕು ಎನ್ನುವ ಅಭಿಪ್ರಾಯವನ್ನು ಹಲವಾರು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಮೂಲತಃ ಹೆಳವರದು ಒಂದು ಜಾತಿಯಾಗಿರದೆ ಒಂದು ವೃತ್ತಿಯಾಗಿತ್ತು. ಕಾಲಾಂತರದಲ್ಲಿ ಅದು ಜಾತಿಯಾಗಿ ಮಾರ್ಪಾಡುಗೊಂಡಿರಬೇಕು. ಮುಖ್ಯವಾಗಿ ಹೆಳವರು ಆಂಧ್ರ ಹಾಗೂ ಕರ್ನಾಟಕಗಳಲ್ಲಿ ಕಂಡುಬರುತ್ತಾರೆ. ಹೆಳವರಲ್ಲಿ ಎತ್ತಿನ ಹೆಳವರು, ಗಂಟೆ ಹೆಳವರು, ಚಾಪೆಹೆಳವರು, ಹಂದಿ ಹೆಳವರು, ಅಡವಿ ಹೆಳವರು ಮುಂತಾಗಿ ಒಳಪಂಗಡ ಗಳಿರುವುದನ್ನು ಕಾಣಬಹುದು. ಊರೂರು ಅಲೆಯುತ್ತ ವಂಶಾವಳಿಗಳನ್ನು ಹೇಳುತ್ತ ಅಲೆಯುವ ಹೆಳವರು ಇತ್ತೀಚೆಗಷ್ಟೇ ನೆಲೆನಿಲ್ಲುತ್ತಿದ್ದಾರೆ.

### ಭೌಗೋಳಿಕತೆ

ಭಾರತದ ಆಂಧ್ರ ಹಾಗು ಕರ್ನಾಟಕ, ತಮಿಳುನಾಡು ಮಹಾರಾಷ್ಟ್ರ ಮತ್ತು ಕೇರಳಗಳಲ್ಲಿ ಸಹ ಕೆಲವು ಕಡೆ ಕಂಡುಬರುವ ಹೆಳವರು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ಗಂಟೆ ಹೆಳವರು, ಹಂದಿಹೆಳವರು, ಎತ್ತಿನ ಹೆಳವರು ಕಂಡುಬಂದರೆ, ಹಾವೇರಿ ಮುಂತಾದ ಉತ್ತರ ಕರ್ನಾಟಕ ಪ್ರದೇಶದಲ್ಲಿ ಎತ್ತಿನ ಹೆಳವರೇ ಹೆಚ್ಚಾಗಿ ಕಂಡುಬರುತ್ತಾರೆ. ಮೈಸೂರು ಕಡೆ ಹೆಚ್ಚಾಗಿ ಗಿಡಮೂಲಿಕೆ ಔಷಧಿ ಕೊಡುವ ಹೆಳವರು ಕಂಡುಬರುತ್ತಾರೆ. ಹೈದರಾಬಾದ ಕರ್ನಾಟಕ ಭಾಗದಲ್ಲಿ ಚಾಪೆ ಹೆಳವರು, ಅಡವಿ ಹೆಳವರು, ಹಂದಿಹೆಳವರು ಅಲ್ಪ ಪ್ರಮಾಣದಲ್ಲಿ ಎತ್ತಿನ ಹೆಳವರು ಕಂಡುಬರುವರು.

ಕೋಷ್ಟಕ : ೨.೧ ಭಾರತದ ಹೆಳವರ ಜನಸಂಖ್ಯೆ (೧೮೮೧)

| ಸಮುದಾಯ | ಪ್ರಾಂತ | ಜನಸಂಖ್ಯೆ |
|---|---|---|
| ಹೆಳವಿ<br>ಪಿಚ್ಚಗುಂಟ್ಲ | ಬಾಂಬೆ<br>ಮದ್ರಾಸ<br>ಹೈದ್ರಾಬಾದ್ | ೧೦೮೫<br>೬೪೩೨<br>೩೦೬೩ |

ಬಾಂಬೆ ಪ್ರಾಂತ್ಯದಲ್ಲಿ ಹೆಳವಿ ಎಂಬ ಹೆಸರಿನಲ್ಲಿ ಹೆಳವರನ್ನು ಗುರುತಿಸಲಾಗುತ್ತಿತ್ತು. ಈ ಸಮುದಾಯವನ್ನು ಕ್ರಿಮಿನಲ್ಲ ಟ್ರೈಬ್ ಆಕ್ಟ್ಯನಲ್ಲಿ ಕೈಬಿಡಲಾಗಿತ್ತು. ಆದರೆ ಮದ್ರಾಸ್ ಮತ್ತು ಹೈದ್ರಾಬಾದ ಪ್ರಾಂತ್ಯದಲ್ಲಿ ಪಿಚ್ಚಗುಂಟ್ಲವನ್ನು ಕ್ರಿಮಿನಲ್ಲ ಟ್ರೈಬ್ ಆಕ್ಟ್ಯನಲ್ಲಿ ಸೇರಿಸಲಾಗಿತ್ತು.

೨೯ ಮೇ ೧೯೩೫ರ ಆದೇಶ, ಅಮೆಂಡ್‌ಮೆಂಟ್ ೨೩ ಏಪ್ರಿಲ್ ೧೯೪೨ರಲ್ಲಿ ಸೆಕ್ಷನ್ ೩ರ ಕ್ರಸಂ. ೪೫ರಲ್ಲಿ ಹೆಳವ ಸಮುದಾಯವನ್ನು ಬ್ಯಾಕ್‌ವರ್ಡ ಪಟ್ಟಿಯಲ್ಲಿ ಮೊದಲಿಗೆ ಸೇರಿಸಲಾಗಿತ್ತು. ಇದು ಬಾಂಬೆ ಕರ್ನಾಟಕಕ್ಕೆ ಮಾತ್ರ ಸೀಮಿತಗೊಂಡಿತು.

ಕ್ರಸಂ. ೧೫ ಹೆಳವ ಪದವನ್ನು ನೊಮೆಡಿಕ್ ಟ್ರೈಬ್, ಕ್ರಸಂ. ೪೦ ಪಿಚ್ಚಗುಂಟಲ ಪದವನ್ನು ೪.೩.೧೯೭೭ ದಿನಾಂಕಕ್ಕಿಂತ ಮೊದಲು ನೊಮೆಡಿಕ್ ಮತ್ತು ಸೆಮಿ ನೊಮೆಡಿಕ್ ಎಂದು ಗುರುತಿಸಲಾಗುತ್ತಿತ್ತು. ಈ ದಿನಾಂಕದ ನಂತರ ಸಮುದಾಯದ ಈ ಪದಗಳಿಗೆ ಹಿಂದುಳಿದ ವರ್ಗ ಎನ್ನುವ ಹೆಸರು ಬಂದಿತು.

೧೩.೧೦.೧೯೮೬ ರಿಂದ ಹೆಳವ ಮತ್ತು ಸಂವಾದಿ ಪದಗಳನ್ನು ಗ್ರೂಪ 'ಎ' ಗೆ ಸೇರಿಸಲಾಗಿತ್ತು.

೧೭.೯.೧೯೯೪ರಲ್ಲಿ ವರ್ಗ ೧ ಕ್ಕೆ ಹೆಳವರನ್ನು ಸೇರಿಸಲ್ಪಟಿತು.

೩೦ ಮಾರ್ಚ ೨೦೦೨ ಕರ್ನಾಟಕದ ಹಿಂದುಳಿದ ಜಾತಿಗಳ ಅನುಸೂಚಿಯಲ್ಲಿ ಪ್ರವರ್ಗ ೧ರಲ್ಲಿ ಕ್ರಸಂ. ೫ ರಲ್ಲಿ (j) ಹೆಳವ (k) ಹೆಳೊವ (l) ಹೊಲೆವ (m) ನಂದಿವಾಲ (n) ಪಿಚಿಗುಂಟ (o) ಪಿಚ್ ಗುಂಟಲ (p) ಪಿಚಿಗುಂಟಲ ಎಂದು ಸೇರಿಸಲ್ಪಟ್ಟಿವೆ.

**ಜನಸಂಖ್ಯೆ**

೨೦೦೭ರ ಕನ್ನಡ ಪುಸ್ತಕ ಪ್ರಾಧಿಕಾರ ಸಮೀಕ್ಷೆಯಲ್ಲಿ ಸಮಯದ ಮಿತಿಯಿಂದಾಗಿ ಪೂರ್ಣ ಪ್ರಮಾಣದಲ್ಲಿ ಸಮೀಕ್ಷೆ ನಡೆಸಲು ಸಾಧ್ಯವಾಗಲಿಲ್ಲ. ಹೆಳವರ ಜನಸಂಖ್ಯೆ ಕುರಿತು ಪೂರ್ಣ ಮಾಹಿತಿ ದೊರೆಕಿಸಬೇಕೆಂಬ ಆಪೇಕ್ಷೆಯಿಂದ ಅಧ್ಯಯನಕಾರರು ನೀಡಿದ ಮಾಹಿತಿ ಹಾಗೂ ಹೆಳವರ ರಾಜ್ಯ ಸಂಘಟನೆ ಒದಗಿಸಿದ ಜನಸಂಖ್ಯಾ ಮಾಹಿತಿಗಳನ್ನು ಇದರೊಂದಿಗೆ ನೀಡಲಾಗಿದೆ. (ಅಂಕಿಅಂಶಗಳು:೧)

**ಕೋಷ್ಟಕ: ೨.೨. ಸಮೀಕ್ಷೆಗೊಳಪಟ್ಟ ಕರ್ನಾಟಕದ ಹೆಳವ ಸಮುದಾಯದ ಜಿಲ್ಲಾವಾರು, ಕುಟುಂಬವಾರು, ಲಿಂಗವಾರು ಜನಸಂಖ್ಯೆ (೨೦೦೭)**

| | ಜಿಲ್ಲೆಗಳು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧ | ಬಳ್ಳಾರಿ | ೮೦ | ೧೭೪ | ೧೭೫ | ೩೪೯ |
| ೨ | ಬೆಂಗಳೂರು ನಗರ | ೨೩ | ೬೦ | ೪೬ | ೧೦೬ |
| ೩ | ಬೆಳಗಾವಿ | ೨೪೪ | ೬೬೫ | ೬೦೭ | ೧೨೭೨ |
| ೪ | ಚಿಕ್ಕಮಗಳೂರು | ೧೩೩ | ೨೮೫ | ೨೭೦ | ೫೫೫ |
| ೫ | ಚಿತ್ರದುರ್ಗ | ೬೬೩ | ೧೫೨೨ | ೧೪೩೬ | ೨೯೫೮ |

| | | | | | |
|---|---|---|---|---|---|
| ೭ | ದಾವಣಗೆರೆ | ೩೭೬ | ೭೦೭ | ೬೭೫ | ೧೩೮೨ |
| ೭ | ಧಾರವಾಡ | ೨ | ೩ | ೨ | ೫ |
| ೮ | ಗದಗ | ೪೧ | ೬೮ | ೬೭ | ೧೩೫ |
| ೯ | ಗುಲಬರ್ಗಾ | ೨೫೮ | ೭೧೧ | ೬೭೯ | ೧೩೯೦ |
| ೧೦ | ಹಾಸನ | ೪ | ೧೫ | ೧೩ | ೨೮ |
| ೧೧ | ಹಾವೇರಿ | ೧೧೦ | ೨೪೬ | ೨೫೭ | ೫೦೩ |
| ೧೨ | ಕೊಪ್ಪಳ | ೧೮ | ೩೫ | ೪೩ | ೭೮ |
| ೧೩ | ರಾಯಚೂರು | ೩೭೭ | ೯೨೩ | ೯೨೧ | ೧೮೪೪ |
| ೧೪ | ಶಿವಮೊಗ್ಗ | ೧೧೦ | ೧೯೮ | ೨೧೬ | ೪೧೪ |
| | ಒಟ್ಟು | ೨೪೩೯ | ೫೬೧೨ | ೫೪೦೭ | ೧೧೦೧೯ |

**ಕರ್ನಾಟಕೇತರ ರಾಜ್ಯಗಳಲ್ಲಿಯ ಪ್ರಚಲಿತ ನೆಲೆಗಳು**

ಕರ್ನಾಟಕ ರಾಜ್ಯದಲ್ಲಿ ಅಲ್ಲದೆ ಸುತ್ತಮುತ್ತಲಿನ ನೆರೆ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರ ಪ್ರದೇಶ, ತಮಿಳುನಾಡು ಮತ್ತು ಕೇರಳಗಳಲ್ಲಿ ಸಹ ಕೆಲವು ಕಡೆ ಈ ಸಮುದಾಯದ ನೆಲೆಗಳಿವೆ. ಆಂಧ್ರಪ್ರದೇಶದಲ್ಲಿ ಪಿಚ್ಚಗುಂಟಲು ಎಂದು ಕರೆಯಲಾಗುತ್ತಿದ್ದು ಈಗ ವಂಶರಾಜರೆಂದು ಹೊಸದಾಗಿ ಈ ಸಮುದಾಯವನ್ನು ಗುರುತಿಸಲಾಗುತ್ತಿದೆ. ಆಂಧ್ರ ಪ್ರದೇಶದಲ್ಲಿರುವ ಯನಾದಿ ಸಮುದಾಯ ಮತ್ತು ಪಿಚ್ಚಗುಂಟಲು ಸಮುದಾಯ ಹೆಳವ ಸಮುದಾಯದ ಸಮಾನಾರ್ಥ ಪದಗಳೆಂದು ಗುರುತಿಸಲಾಗಿದೆ.

**ಗ್ರಾಮೀಣ ಹಾಗೂ ನಗರ ಜನಸಂಖ್ಯೆ**

ಹೆಳವ ಸಮುದಾಯವು ನಗರ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸವಾಗಿರುವುದು. ನಗರಗಳ ಕೊಳಗೇರಿಗಳಲ್ಲಿ ಅಥವಾ ಬಯಲು ಜಾಗಗಳಲ್ಲಿ ಗುಡಾರ ಇಲ್ಲವೆ ಚಿಕ್ಕ ಗುಡಿಸಲುಗಳನ್ನು ಹಾಕಿಕೊಂಡು ಜೀವನ ನಿರ್ವಹಣೆ ಮಾಡು ವುದನ್ನು ಕಾಣಬಹುದಾಗಿದೆ. ಕರ್ನಾಟಕದ ಗ್ರಾಮೀಣ ಭಾಗಗಳಲ್ಲಿ ಹೆಳವ ನೆಲೆಗಳು ನಗರಗಳಿಗಿಂತಲೂ ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿ ಸಾಮಾನ್ಯವಾಗಿ ಬಯಲು ಜಾಗಗಳಲ್ಲಿ ಗುಡಾರ, ಗುಡಿಸಲುಗಳನ್ನು ಹಾಕಿಕೊಂಡು ವಾಸವಾಗಿರುವುದನ್ನು ಗಮನಿಸಬಹುದಾಗಿದೆ. ಭಿಕ್ಷಾಟನೆಯನ್ನೇ ವೃತ್ತಿಯಾಗಿಸಿಕೊಂಡಿರುವ ಇವರಿಗೆ ಪಟ್ಟಣಗಳಿಗಿಂತ ಹಳ್ಳಿಗಳಿಗಳಲ್ಲಿಯೇ ಹೆಚ್ಚು ಭಿಕ್ಷೆ ಸಿಗುವ ಸಾಧ್ಯತೆಗಳಿರುತ್ತವೆ. ಹಾಗೇ ಯಾವುದೇ ಅಭ್ಯಂತರವಿಲ್ಲದೆ ಸುಲಭವಾಗಿ ಬಯಲು ಮತ್ತು ಕೊಳಚೆ ಪ್ರದೇಶಗಳ ಜಾಗಗಳಲ್ಲಿ ನೆಲೆಸುವ ಅವಕಾಶಗಳು ಪಟ್ಟಣಗಳಿಗಿಂತ ಹಳ್ಳಿಗಳಲ್ಲಿಯೇ ಹೆಚ್ಚಾಗಿರುವುದರಿಂದ ಇವರು ಗ್ರಾಮೀಣ ಪ್ರದೇಶಗಳನ್ನು ಹೆಚ್ಚಾಗಿ ಆಯ್ಕೆ ಮಾಡಿ ಕೊಂಡಿರಬಹುದು ಎನಿಸುತ್ತದೆ. ಗ್ರಾಮೀಣ ಭಾಗದಲ್ಲಿ ಶೇ. ೮೭.೧೫ ರಷ್ಟು ಕುಟುಂಬ ಗಳು ವಾಸಿಸಿದರೆ ನಗರ ಪ್ರದೇಶದಲ್ಲಿ ಶೇ. ೧೨.೮೩ ರಷ್ಟು ಕುಟುಂಬಗಳು ವಾಸಿಸುತ್ತಿವೆ (ಕೋಷ್ಟಕ:೨.೩).


ಕರ್ನಾಟಕ
ಹೆಳವ ಬುಡಕಟ್ಟು ನೆಲೆಗಳು
ಬೀದರ
ಗುಲಬರ್ಗಾ
ಬಿಜಾಪುರ
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಕೋಲಾರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಚಿಕ್ಕಬಳ್ಳಾಪುರ
ಬೆಂಗಳೂರು ನಗರ
ಹಾಸನ
ದಕ್ಷಿಣ ಕನ್ನಡ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ
ಕುಟುಂಬಗಳು
● ೧೦೦ರ ಒಳಗೆ
⊙ ೧೦೧ - ೩೦೦
○ ೩೦೧ - ೫೦೦
♦ ೫೦೧ - ೭೦೦
✧ ೭೦೧ - ೯೦೦
✪ ೯೦೧ - ೧೦೦೦
★ ೧೦೦೧ ರ ಮೇಲ್ಪಟ್ಟು

ಕೋಷ್ಟಕ : ೨.೩ ಸಮೀಕ್ಷೆಗೊಳಪಟ್ಟ ಹೆಳವ ಗ್ರಾಮೀಣ ಮತ್ತು ನಗರ ಜನಸಂಖ್ಯೆ ಪ್ರಮಾಣ (೨೦೦೭)

| ಕ್ರಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧. | ಗ್ರಾಮೀಣ | ೪೮೯೩ | ೪೭೧೧ | ೯೬೦೪ |
| ೨. | ನಗರ | ೭೧೯ | ೬೯೬ | ೧೪೧೫ |

## ವಯೋ ಗುಂಪು

ಯಾವುದೇ ಸಮುದಾಯದ ಶೈಕ್ಷಣಿಕ ಮತ್ತು ಆರ್ಥಿಕ ಅಂಶಗಳನ್ನು ಅರಿಯಲು ಆ ಸಮುದಾಯದ ಜನರ ವಯೋ ಗುಂಪುಗಳನ್ನು ತಿಳಿಯುವುದು ಅಗತ್ಯವಾಗಿರುತ್ತದೆ. ಹೆಳವರ ಈ ಅಂಶಗಳನ್ನು ಅರಿಯಲು ೪ ವರ್ಷ ಒಳಗಿನವರ ಅಂಕಿಅಂಶಗಳನ್ನು ಕಲೆಹಾಕಲಾಗಿದೆ. ಈ ವಯೋ ಗುಂಪಿನವರನ್ನು ಹೊರಗಿಟ್ಟು ಸಾಕ್ಷರತೆಯ ಪ್ರಮಾಣವನ್ನು ಪಡೆಯಲಾಗಿದೆ. ಇವರ ಒಟ್ಟು ಜನಸಂಖ್ಯೆಯಲ್ಲಿ ಈ ವಯೋ ಗುಂಪಿನವರ ಪ್ರಮಾಣ ೧೦.೧೬ ರಷ್ಟಿದೆ. ೫ ರಿಂದ ೧೭ ವಯೋ ಗುಂಪನ್ನು ಸಾಕ್ಷರತೆಗೆ ಒಳಪಡುವ ಅಧ್ಯಯನಶೀಲ ಆದರೆ ಉದ್ಯೋಗಕ್ಕೆ ಅರ್ಹವಲ್ಲದ ಗುಂಪು ಎಂದು ಪರಿಗಣಿಸಲಾಗಿದೆ. ಈ ಗುಂಪಿನಲ್ಲಿಯ ಇವರ ಪ್ರಮಾಣ ೨೭.೬೭ರಷ್ಟಿರುವುದು. ೧೮ ರಿಂದ ೪೦ ವಯೋ ಗುಂಪನ್ನು ಕಾಯಕರ್ಹ, ಸಂತಾನರ್ಹ ಹಾಗೂ ಚಲನಶೀಲ ಗುಂಪೆಂದು ಗ್ರಹಿಸಲಾಗುವುದು. ಈ ಗುಂಪಿನಲ್ಲಿಯ ಇವರ ಪ್ರಮಾಣ ೪೩.೦೮ ರಷ್ಟಿರುವುದು. ೪೧ ರಿಂದ ೬೦ ವಯೋ ಗುಂಪನ್ನು ಮಾರ್ಗದರ್ಶಿ ಮತ್ತು ಅನುಭವಿ ಗುಂಪೆಂದು ಭಾವಿಸಲಾಗುವುದು. ಈ ಗುಂಪಿನಲ್ಲಿಯ ಇವರ ಪ್ರಮಾಣ ೧೩.೧೮ ರಷ್ಟಿರುವುದು. ೬೧ರ ಮೇಲ್ಪಟ್ಟ ವಯೋ ಗುಂಪು ಅವಲಂಬಿತ, ಅನುಭವಿ, ಅಸಹಾಯಕ, ಕಾಯಕರ್ಹವಲ್ಲದ ಗುಂಪೆಂದು ಪರಿಗಣಿಸಲಾಗುವುದು. ಈ ಗುಂಪಿನಲ್ಲಿಯ ಇವರ ಪ್ರಮಾಣ ೫.೯೧ ರಷ್ಟಿರುವುದು(ಕೋಷ್ಟಕ:೨.೫). ಹೆಳವರಲ್ಲಿ ಕಾಯಕರ್ಹ ವಯೋ ಗುಂಪಿನವರು ಗಣನೀಯ ಪ್ರಮಾಣದಲ್ಲಿದ್ದರೂ ಆಧುನಿಕ ಸಾಕ್ಷರತೆಯ ಕೊರತೆಯಿಂದಾಗಿ ಇವರ ಆರ್ಥಿಕ ಸ್ಥಿತಿ ಅದೇ ಪ್ರಮಾಣದಲ್ಲಿ ಸುಧಾರಿಸುವುದು ಕಷ್ಟಸಾಧ್ಯ. ಇವರಲ್ಲಿ ೦-೪ ರೊಳಗಿನ ವಯಸ್ಸಿನ ಮಕ್ಕಳು ಒಟ್ಟು ೧೧೨೦ ಇದ್ದು ಇದರಲ್ಲಿ ಬಾಲಕರು ೫೭೫ ಬಾಲಕಿಯರು ೫೪೫ರಷ್ಟಿದ್ದಾರೆ. ಅಂದರೆ ಬಾಲಕರ ಜನನ ಪ್ರಮಾಣಕ್ಕಿಂತ ಬಾಲಕಿಯರ ಜನನ ಪ್ರಮಾಣ ಕಡಿಮೆಯಾಗಿ ಇತ್ತೀಚಿನ ವರ್ಷಗಳಲ್ಲಿ ಈ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಇನ್ನುಳಿದ ವಯೋಮಾನಗಳ ಅನುಪಾತವನ್ನು ನೋಡಿದರೆ ಪುರುಷರ ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣ ಸ್ವಲ್ಪ ಕಡಿಮೆ ಇರುವುದು ಕಂಡುಬರುತ್ತದೆ.

ಕೋಷ್ಟಕ: ೨.೪ ಸಮೀಕ್ಷೆಗೊಳಪಟ್ಟ ಹೆಳವರ ವಯೋಗುಂಪುವಾರು
ಲಿಂಗವಾರು ಜನಸಂಖ್ಯೆ (೨೦೦೭)

| ಸಂ. | ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ೦-೪ | ೫೭೫ | ೫೪೫ | ೧೧೨೦ |
| ೨ | ೦೫-೧೭ | ೧೫೯೬ | ೧೪೫೩ | ೩೦೪೯ |
| ೩ | ೧೮-೪೦ | ೨೩೪೧ | ೨೪೦೬ | ೪೭೪೭ |
| ೪ | ೪೧-೬೦ | ೭೭೭ | ೬೭೫ | ೧೪೫೨ |
| ೫ | ೬೧ರ ಮೇಲ್ಪಟ್ಟು | ೩೨೩ | ೩೨೮ | ೬೫೧ |
| | ಒಟ್ಟು | ೫೬೧೨ | ೫೪೦೭ | ೧೧೦೧೯ |

**ಲಿಂಗಾನುಪಾತ**

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗಾನುಪಾತವಾಗಿರುತ್ತದೆ. ೨೦೦೧ರ ಜನಗಣತಿಯ ಪ್ರಕಾರ ಕ್ರಮವಾಗಿ ಲಿಂಗಾನುಪಾತವು ಭಾರತದಲ್ಲಿ ೯೩೩, ಕರ್ನಾಟಕದಲ್ಲಿ ೯೬೫ ಇದ್ದರೆ ಕರ್ನಾಟಕದ ಹೆಳವ ಸಮುದಾಯದ ಸರಾಸರಿ ಲಿಂಗಾನುಪಾತ ೯೬೩ ಇರುವುದು.

**ಕುಟುಂಬ ಗಾತ್ರ**

ಕರ್ನಾಟಕ ಹೆಳವ ಸಮುದಾಯದ ಸರಾಸರಿ ಕುಟುಂಬದ ಗಾತ್ರ ೪.೫೧ ಇಂದು ವಿಭಕ್ತ ಕುಟುಂಬಗಳು ಹೆಚ್ಚುತ್ತಿವೆ. ಹಿಂದೆ ಅವಿಭಕ್ತ ಕುಟುಂಬಗಳು ಹೆಚ್ಚಿರುತ್ತಿದ್ದವು. ಬೇಟೆಗಾಗಿ, ಮೀನುಗಾರಿಕೆ, ಕಾಯಕಗಳಿಗೆ ಇದು ಅನಿವಾರ್ಯವಾಗಿತ್ತು. ಈ ಕಾಯಕಗಳು ನಶಿಸುತ್ತಿದ್ದಂತೆ ವಿಭಕ್ತ ಕುಟುಂಬಗಳು ಹೆಚ್ಚುತ್ತಿವೆ.

## ೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

### ಸ್ಥಳಾವರಣ

ಹೆಳವರು ಮೂಲತಃ ಅಲೆಮಾರಿಗಳು. ಹೀಗಾಗಿ ಇವರಿಗೆ ಒಂದು ನೆಲೆಯೆಂಬು ದಿರಲಿಲ್ಲ. ಇವರು ಎಲ್ಲಿ ನೆಲೆಸುವರೋ ಅದೇ ಆ ಕ್ಷಣದ ನೆಲೆಯಾಗಿರುತ್ತಿತ್ತು. ಹೆಳವರು ನಿತ್ಯದ ಅಡುಗೆ, ಊಟ, ನಿದ್ರೆ, ಮುಂತಾದವುಗಳಿಗೆ ತಮ್ಮ ಡೇರೆ ಇಲ್ಲವೆ ತಾವು ನಿರ್ಮಿಸಿಕೊಂಡ ಮನೆಯನ್ನು ಆಶ್ರಯಿಸಿರುತ್ತಾರೆ. ಹೀಗಾಗಿ ಡೇರೆ ಅಥವಾ ಮನೆ ನಿತ್ಯದ ಬದುಕಿನ ಕ್ರಿಯಾವಿಧಿಯ ಸ್ಥಳಾವರಣವಾಗಿ ಮಾರ್ಪಡುತ್ತದೆ. ಹಾಗೆ ಹೆರಿಗೆಯಾದಾಗ, ಋತುಮತಿಯಾದಾಗ, ಸಾವು ಸಂಭವಿಸಿದಾಗ ಸೂತಕವನ್ನು ಆಚರಿಸುವ ಕ್ರಿಯೆ ಹೆಳವರಲ್ಲಿಯೂ ಕಾಣಬಹುದು. ಹೆರಿಗೆಯಾಗಿ ಹದಿನಾರು ದಿನದವರೆಗೆ, ಇಲ್ಲವೆ ಗಂಗಮ್ಮನ ಪೂಜೆ ಮಾಡುವವರೆಗೆ ಹೆರಿಗೆಯಾದ ಹೆಳವರ ಮನೆ ಸೂತಕದ ಮನೆಯಾಗಿ ಪರಿವರ್ತನೆ ಹೊಂದುತ್ತದೆ. ಹಾಗೆ ಮನೆಯ ಹೆಣ್ಣು ಮಗುವೊಂದು ಋತುಮತಿಯಾದಾಗಲೂ ಆ ಮನೆಯನ್ನು ಸೂತಕದ ಮನೆಯಾಗಿಯೇ ನೋಡಲಾಗುತ್ತದೆ. ಅದೇ ರೀತಿ ಮನೆಯಲ್ಲಿ ಯಾರಾದರೂ ಸತ್ತರೆ ಆ ಮನೆಗೆ ಸೂತಕ ಉಂಟಾಗುತ್ತದೆ. ಅಂದರೆ ಮೇಲೆ ತಿಳಿಸಿದ ಪ್ರತಿಯೊಂದು ಸಂದರ್ಭದಲ್ಲಿಯೂ ಸೂತಕದ ಕ್ರಿಯಾವಿಧಿಯಾಗಿ ಮಾರ್ಪಡುವುದಾಗಿದೆ. ಇನ್ನು ಮೂರನೇದಾಗಿ ದೈವ, ದೇವರು, ಹಿರಿಯರಿಗೆ ಸಂಬಂಧಿಸಿದ ಕ್ರಿಯಾವಿಧಿಯ ಸ್ಥಳಾವರಣಗಳಾಗಿ ಮಾರ್ಪಡುತ್ತವೆ.

**ಗೃಹಬಳಕೆ ವಸ್ತುಗಳು :** ಈ ಸಮುದಾಯದವರ ಮನೆಯಲ್ಲಿ ಗೃಹ ಬಳಕೆಗೆ ಎಲ್ಲವೂ ಪ್ಲಾಸ್ಟಿಕ್ ಮಯವಾಗಿ ಆ ವಸ್ತುಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಅಡುಗೆ ಮಾಡಲು, ಈಗಲೂ ಮಣ್ಣಿನ ಗಡಿಗೆ ಮಡಿಕೆಗಳನ್ನು, ನೀರು ಶೇಖರಿಸಲು, ಮಣ್ಣಿನ ಹರವಿಯನ್ನು, ಆಹಾರಧ್ಯಾನ ಸಂಗ್ರಹಕ್ಕಾಗಿ ಮಣ್ಣಿನ ಒಡವೆಗಳನ್ನು ಹಾಗೂ ಬಿದಿರಿನ ಗಣಗಿಗಳನ್ನು ಉಪಯೋಗಿಸುತ್ತಾರೆ. ಊಟಕ್ಕೆ ಅಲ್ಯೂಮಿನಿಯಂ ತಾಟುಗಳು ಇತ್ತೀಚೆಗೆ ಸ್ಟೀಲ್ ತಾಟುಗಳನ್ನೂ ಸಹ ಬಳಕೆ ಮಾಡುತ್ತಾರೆ. ಇವರು ವಿಶೇಷವಾದ ಅಳತೆ ಮಾಪನಗಳು ಇಟ್ಟುಕೊಳ್ಳುವಂತಿಲ್ಲ. ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಿರುವು ದರಿಂದ ಇವರಿಗೆ ಇವುಗಳ ಸಂಪರ್ಕವೇ ಇಲ್ಲದಿರುವುದರಿಂದ ಅಪರಾಧ ಎಸುಗುವುದು ಹೇಗೆ ಸಾಧ್ಯ.

**ಪರಿಸರ ನೈರ್ಮಲ್ಯ :** ಈ ಸಮುದಾಯದವರಿಗೆ ಪರಿಸರದ ಬಗ್ಗೆ ಅಥವಾ ನೈರ್ಮಲ್ಯದ

ಬಗ್ಗೆ ಕಾಳಜಿ ಕಡಿಮೆ. ಈಗಲೂ ಕಾಯಿಲೆಗಳು ಬಂದಾಗ ಮನೆಯ ಔಷಧಿಗಳನ್ನು ಮಾಡಿಕೊಂಡು ಚಿಕಿತ್ಸೆ ಪಡೆಯುತ್ತಾರೆ. ಇಷ್ಟಕ್ಕೂ ಮೀರಿ ಹೆಚ್ಚಾದರೆ ದೇವರ ಮೇಲೆ ಭಾರಹಾಕಿ ರೋಗಿಯನ್ನು ದೇವರ ಸನ್ನಿಧಿಯಲ್ಲಿ ಮಲಗಿಸುತ್ತಾರೆ. ತಿಳುವಳಿಕೆ ಹೊಂದಿರುವರು ಅಸ್ಪತ್ರೆಗೆ ಹೋಗುತ್ತಾರೆ. ಈ ಜನರು ವಾಸ ಮಾಡುವ ಹಟ್ಟಿಗಳು, ಹಾಡಿಗಳು, ಕಾಲೋನಿಗಳು, ಪ್ರತ್ಯೇಕವಾಗಿರುವುದರಿಂದ ಪ್ರಕೃತಿ ದತ್ತವಾದ ಗಾಳಿ ಬೆಳಕು ಇರುತ್ತದೆ. ಬೇರೆ ಪರಿಸರ ಮಾಲಿನ್ಯ ಇರುವುದಿಲ್ಲ. ಸಾಮಾನ್ಯವಾಗಿ ನಾಗರಿಕ ಸಂಪರ್ಕ ಇರುವುದರಿಂದ ತಮ್ಮ ಮನೆಗಳ ಸುತ್ತಲು ಸ್ವಚ್ಛತೆ ಕಾಪಾಡಿಕೊಂಡು ಬರುತ್ತಾರೆ. ತ್ಯಾಜ ವಸ್ತುಗಳನ್ನು ಹಟ್ಟಿಯಿಂದ ಸ್ವಲ್ಪ ದೂರದಲ್ಲಿ ಗುಂಡಿ ತೆಗೆದು ಹಾಕುತ್ತಾರೆ. ಅದಕ್ಕೆ ತಿಪ್ಪೆಗುಂಡಿ ಎಂದು ಕರೆಯುತ್ತಾರೆ. ಮನೆಯಲ್ಲಿಯ ದನ, ಕರು, ಎತ್ತು, ಆಡು, ಕುರಿ ಪ್ರಾಣಿಗಳ ಸಗಣಿ, ಹಿಕ್ಕೆಗಳು ಮತ್ತು ಕಸಕಡ್ಡಿಗಳನ್ನು ಕೂಡಿಸಿ ಗೊಬ್ಬರ ಗುಂಡಿಯನ್ನು ಮಾಡಿ ವಲಸೆ ಹೋಗುವಾಗ ಊರಿನ ಭೂಹಿಡುವಳಿದಾರರಿಗೆ ಮಾರಾಟ ಮಾಡುತ್ತಾರೆ.

**ಶಾರೀರಿಕ ಆರೋಗ್ಯ ಮತ್ತು ಶುಚಿತ್ವ :** ಈ ಸಮುದಾಯದ ಜನರು ನಿತ್ಯವೂ ಚಕ್ಕಡಿ ಬಂಡಿ ಮುಖಾಂತರ ಊರಿಂದೂರಿಗೆ ಹೋಗುತ್ತಿರುವುದರಿಂದ ಚಕ್ಕಡಿಯೊಳಗೆ ಸಾಮಾನುಗಳು ಮತ್ತು ಮಕ್ಕಳನ್ನು ಹಾಕುತ್ತಾರೆ. ದೊಡ್ಡವರಾದ ಗಂಡಸರು ಹೆಂಗಸರು ಚಕ್ಕಡಿ ಹಿಂದೆ ನಡೆದುಕೊಂಡೇ ಹೋಗುತ್ತಾರೆ. ಹೀಗೆ ತಿರುಗುವಾಗ ಅವರಿಗೆ ವ್ಯಾಯಾಮ ಆಗುತ್ತದೆ. ಶಾರೀರಿಕ ಧಾರ್ಡ್ಯತ್ವ ಬರುತ್ತದೆ. ಅಪ್ರತ್ಯಕ್ಷವಾಗಿ ಈ ಆರೋಗ್ಯ ಭಾಗ್ಯ ಅವರಿಗೆ ಲಭಿಸುತ್ತದೆ. ಹಳ್ಳ, ಹೊಂಡ, ಕೆರೆ ಮತ್ತು ಭಾವಿ ದಂಡೆಯ ಮೇಲ್ಗಡೆ ಮೈತೊಳೆದು ಕೊಳ್ಳುತ್ತಾರೆ. ಬೇವಿನ ಕಡ್ಡಿ, ಉತ್ತರಾಣಿ ಕಡ್ಡಿಗಳಿಂದಲೂ ಹಲ್ಲು ಉಜ್ಜುತ್ತಾರೆ. ಜೊತೆಗೆ ಇದ್ದಿಲು ಪುಡಿ ಹಾಗೂ ಕುಳ್ಳಿನ ಬೂದಿಯಿಂದ ತಿಕ್ಕುತ್ತಾರೆ. ಇದು ಹಿಂದಿನಿಂದಲೂ ಈ ಪದ್ಧತಿಯಲ್ಲಿಯೇ ಬಂದಿದ್ದಾರೆ. ಮುಂದುವರಿದವರು ಪೇಟೆಯಲ್ಲಿ ದೊರೆಯುವ ಹಲ್ಲುಪುಡಿ, ಟೂಥ್‌ಪೇಸ್ಟ್‌ಗಳನ್ನು ಸಹ ಉಪಯೋಗಿಸುವುದು ಕಂಡು ಬರುತ್ತದೆ. ಇದರಿಂದ ಇವರಿಗೆ ಗೊತ್ತಿರದಿದ್ದರೂ ಅವರು ಖರ್ಚಿಲ್ಲದೆ ಮಾಡುವ ನಿತ್ಯದ ಕೆಲಸಗಳು ಆರೋಗ್ಯಕರ ಅಭ್ಯಾಸವಾಗಿ ಹೋಗಿವೆ. ತಾವು ತೊಡುವ ಬಟ್ಟೆಬರೆಗಳನ್ನು ಕೆರೆಯಲ್ಲಿ ಸ್ವಚ್ಛವಾಗಿ ತೊಳೆದುಕೊಂಡು ಬರುತ್ತಾರೆ.

ಭಿಕ್ಷಾಟನೆ ವೃತ್ತಿಯನ್ನು ಅವಲಂಬಿಸಿದವರು ತಮ್ಮ ಒಕ್ಕಲು ಮನೆಗಳಿಗೆ ಹೋಗಬೇಕಾಗಿರುವುದರಿಂದ ಕುಡಿತ ಮುಂತಾದ ದುಶ್ಚಟಗಳಿಂದ ದೂರವಾಗಿರುತ್ತಾರೆ. ಅದಕ್ಕಾಗಿ ಸ್ವಚ್ಛವಾಗಿ ಇದ್ದ ಬಟ್ಟೆಗಳನ್ನು ಕೊಂಡು ಒಕ್ಕಲು ಮನೆಗಳಿಗೆ ಠೀವಿಯಿಂದ ಹೋಗುತ್ತಾರೆ. ಮಹಿಳೆಯರಲ್ಲಿ ಒಬ್ಬರು ವಯಸ್ಸಾದವರು ಮಾತ್ರ ಒಕ್ಕಲು ಮನೆಗೆ ಹೋಗುತ್ತಾರೆ. ಸಾಮಾನ್ಯವಾಗಿ ಸ್ನಾನಮಾಡಿ ಇದ್ದ ಶುಚಿ ಮಾಡಿದ ಬಟ್ಟೆಗಳನ್ನು ಧರಿಸಿಕೊಂಡು ಹಣೆಗೆ ವಿಭೂತಿ, ಕುಂಕುಮ ಹಚ್ಚಿಕೊಂಡು ನೋಡಿದವರಿಗೆ ಗೌರವ ಉಂಟಾಗುವ ರೀತಿಯಲ್ಲಿ ತಮ್ಮ ಉಡುಗೆಯನ್ನು ಧರಿಸಿಕೊಂಡು ಶುಚಿತ್ವವನ್ನು ಕಾಪಾಡಿಕೊಂಡು

ಒಕ್ಕಲು ಮನೆಗೆ ಹೋಗುತ್ತಾರೆ. ಇವರ ಆಹಾರ ಬಳಕೆಗಾಗಿ ಮತ್ತು ಗೃಹಬಳಕೆಯ ಪಾತ್ರೆಗಳು ಕೊರತೆಯಿಂದ ಕೂಡಿದ್ದು ಇವರು ಇರುವ ಅಲ್ಪ ಪ್ರಮಾಣದ ಅಡುಗೆ ಸಾಮಾನುಗಳನ್ನು ಉಪಯೋಗಿಸಿಕೊಂಡು ಸ್ವಚ್ಛತೆಯನ್ನು ಕಾಪಾಡಿಕೊಳ್ಳುತ್ತಾರೆ.

ಬ್ರಹ್ಮಾಂಡದ ಪರಿಕಲ್ಪನೆ

ಎಲ್ಲೆಲ್ಲೂ ನೀರೇ ನೀರು. ಆಗ ಇದ್ದೋರು ಯಾರಪ್ಪಾ ಅಂದ್ರೆ, ನಂದಿ, ಪಾರ್ವತಿ, ಪರಮೇಶ್ವರ ಮತ್ತು ಜಾಬಾಲಿ ಋಷಿ. ಜಾಬಲಿ ಋಷಿ ಹೇಗಿದ್ದಾನೆಂದರೆ ಅವನ ಕೈಯ ಉಗುರುಗಳು ಪತಾಳಕ್ಕೆ ಮುಟ್ಟಿದ್ದವು, ಕಾಲಿನ ಉಗುರುಗಳು ಆಕಾಶ ತಲುಪಿದ್ದವು. ಒಂದು ಮಗ್ಗಲುನಲ್ಲಿ ಆರು ತಿಂಗಳು ಇನ್ನೊಂದು ಮಗ್ಗಲುನಲ್ಲಿ ಮೂರು ತಿಂಗಳು ಮಲಗುತ್ತಿದ್ದನು. ಕಿವಿಯನ್ನು ಹಾಸಿ ಕಿವಿಯನ್ನೇ ಹೊದಿಯುತ್ತಿದ್ದ. ಇಂಥಹ ಜಾಬಲಿಯ ಕುರಿತು ಪಾರ್ವತಿ ಪರಮೇಶ್ವರರು ವಿಚಾರ ಮಾಡಿದರು. ಮಾದಿಗರ ತಂದೆ ಜಾಬಲಿ ಅವನ ಬಳಿ ಹಾಲಮಣೆ, ಪಾಲಮಣೆ, ಜಪಮಣಿ, ತಪಮಣಿ ಹೀಗೆ ಏಳು ತರದ ತತ್ತಿಗಳಿದ್ದವು. ಅವುಗಳನ್ನು ಹೇಗಾದರು ಮಾಡಿ ತೆಗೆದುಕೊಂಡು ಬಾ ಎಂದು ನಂದಿಯನ್ನು ಕಳಿಸಿಕೊಟ್ಟರು. ನಂದಿಯು ಹೋಗಿ ಜಾಬಲಿಯ ಕಿವಿಯಲ್ಲಿ ಗುಟ್ಟು ಒಂದನ್ನು ಹೇಳಿದನು. ಋಷಿಗೆ ಸಿಟ್ಟು ಬಂದಿತು. ಎದ್ದವನೇ ನಂದಿಯ ಮಧ್ಯದ ಕೊಡನ್ನು ಕಿತ್ತುಬಿಟ್ಟ, ನಂದಿಗೆ ಮೂರು ಕೊಡುಗಳಿದ್ದವು. ನಿನು ಏಕೆ ಹೀಗೆ ಮಾಡಿದೆ ಎಂದು ಜಾಬಲಿ ನಂದಿಯನ್ನು ಕೇಳಿದ ಶಿವಪಾರ್ವತಿಯರ ಆಜ್ಞೆಯ ಮೇರೆಗೆ ನಾನು ಹೀಗೆ ಮಾಡಬೇಕಾಯಿತು ಎಂದು ಹೇಳಿದ. ಈ ಮಾತನ್ನು ಕೇಳಿ ಜಾಬಲಿಯು ತನ್ನ ಬಳಿಯಿದ್ದ ತತ್ತಿಗಳನ್ನು ಕೊಟ್ಟ. ತತ್ತಿಗಳನ್ನು ತೆಗೆದುಕೊಂಡು ಬರುವಾಗ ನಂದಿಯು ಎಡವಿದ್ದರಿಂದ ಅವನ ಎಡಗೈಯಲ್ಲಿದ್ದ ತತ್ತಿಯೊಂದು ಒಡೆಯಿತು. ತತ್ತಿ ಒಡೆದು ನೀರು ಚಿಮ್ಮಿ ಭೂಮಿಯಾಯಿತು. ಇದನ್ನು ನೋಡಿ ಆಶ್ಚರ್ಯ ಚಕಿತನಾದ ನಂದಿಯು ಇನ್ನೊಂದು ತತ್ತಿಯನ್ನು ಒಡೆದು ನೋಡಿದ. ಆಗ ಗಿಡ ಮರಗಳು ಹುಟ್ಟಿದವು. ಮತ್ತೊಂದು ತತ್ತಿಯನ್ನು ಒಡೆದ ಗುಡ್ಡಬೆಟ್ಟಗಳಾದವು.

ನಾವು ನಾಲ್ಕೆ ಜನ ಜೀವಂತವಾಗಿರುವುದು ಜಗಮಂಡಲ ಉತ್ಪತ್ತಿ ಮಾಡಬೇಕು ಎಂದು ಪಾರ್ವತಿ ಶಿವನಿಗೆ ಹೇಳಿದಳು. ಭೂಮಿತಾಯೊಳಗೆ ಕೈ ಹಾಕು ಎಂದು ತಿಳಿಸಿದ. ಆದರೆ ಭೂಮಿ ತಾಯಿ ಮಣ್ಣು ಕೊಡಲು ಒಪ್ಪಲಿಲ್ಲ. ಪಾರ್ವತಿಯು ಮಣ್ಣಿನ ಕಡ ಕೊಡು ಎಂದು ಕೇಳಿದಳು. ಪರಮಾತ್ಮನು ತನ್ನ ಮೈಮೇಲಿನ ಬೆವರು ಹಾಗೂ ಮಣ್ಣನ್ನು ಕೊಟ್ಟ, ಅದರಿಂದ ಮುದಗೊಂಡ ಹಾಗೂ ಮೊದಲಾಯಿ ಎನ್ನುವ ಹೆಸರಿನ ಮಕ್ಕಳನ್ನು ಸೃಷ್ಟಿ ಮಾಡಿದರು. ಅವರೇ ಈ ಭೂಮಿಗೆ ಮೂಲ ಪುರುಷರಾದರು.

ಅವರಿಬ್ಬರು ದೊಡ್ಡವರಾದರು ಅವರಿಗೆ ಏಳು ಜನ ಮಕ್ಕಳು ಹುಟ್ಟಿದರು. ಅವರನ್ನು ಆದಿಗೊಂಡ, ಅಮಲಗೊಂಡ, ಕ್ಯಾಮಗೊಂಡ, ಜ್ಯೋತಿಗೊಂಡ, ಒಕ್ಕಲುಗೊಂಡ, ಪೊದುಗೊಂಡ, ಸಿದ್ಧಗೊಂಡ ಎನ್ನುವ ಮಕ್ಕಳು ಹುಟ್ಟಿದರು. ಹಾಗೆ ಏಳು ಜನ

ಹೆಣ್ಣು ಮಕ್ಕಳು ಹುಟ್ಟಿದ್ದರು. ಅಣ್ಣ ತಂಗಿಯರಲ್ಲಿಯೇ ಮದುವೆಯಾಯಿತು. ಅವರಿಂದಾಗಿ ಈ ಜಗತ್ತು ಸೃಷ್ಟಿಗೊಂಡಿತು.

ಹೆಳವರಲ್ಲಿ ಸ್ವರ್ಗ, ನರಕಗಳ ಕಲ್ಪನೆ ಇದೆ. ಪುನರ್ಜನ್ಮದ ಕುರಿತು ನಂಬಿಕೆ ಇದೆ. ವ್ಯಕ್ತಿಯೊಬ್ಬ ತೀರಿಕೊಂಡ ನಂತರ ಮೂರು ದಿನಕ್ಕೆ ಕೂಳು ಹಾಕುವ ಪದ್ಧತಿ ಇದೆ. ಕಾಗೆ ಬಂದು ಹಣೆಯ ಮೇಲಿನ ಕೂಳನ್ನು ಮುಟ್ಟಿದರೆ ಸತ್ತ ವ್ಯಕ್ತಿಯ ಹಣೆ ಬರಹ ತೀರಿ ಅವನು ಸ್ವರ್ಗಕ್ಕೆ ತಲುಪಿದ್ದಾನೆ ಎಂದು ನಂಬುತ್ತಾರೆ. ಹೊಟ್ಟೆ ಭಾಗದ ಕೂಳನ್ನು ಮುಟ್ಟಿದರೆ ವ್ಯಕ್ತಿಗೆ ಪೂರ್ಣ ಆಯುಷ್ಯ ತೀರಿಲ್ಲ. ಅವನು ಸ್ವರ್ಗ ನರಕಗಳನ್ನು ತಲುಪದೆ ಅಂತರ ಪಿಶಾಚಿಯಾಗಿ ತಿರುಗುತ್ತಾನೆ. ಕಾಲಿನ ಭಾಗದ ಕೂಳನ್ನು ಕಾಗೆ ಮುಟ್ಟಿದರೆ ಸತ್ತಾತನಿಗೆ ನರಕ ಪ್ರಾಪ್ತಿಯಾಗುತ್ತದೆ ಎನ್ನುವ ನಂಬಿಕೆ ಇದೆ. ಕಾಲಿಲ್ಲದ ಹೆಳವನನ್ನು ಬಸವಣ್ಣ ಹುಟ್ಟುಹಾಕಿದನು ಎನ್ನುವ ಕಲ್ಪನೆ ಇವರಲ್ಲಿದೆ.

# ೪

# ಬಂಧುತ್ವ ಮತ್ತು ವಿವಾಹ

## ಬೆಡಗುಗಳು

ಪೂರ್ವದಲ್ಲಿ ಈ ಸಮುದಾಯದವರು ಆಯಾ ಕುಲದವರೆಂದು ಗುರುತಿಸಲು ಪ್ರಾಣಿ ಪಕ್ಷಿಗಳನ್ನು ಸಾಕುವುದು, ತಾವು ವಾಸಿಸುವಲ್ಲಿ ಗಿಡಮರಗಳನ್ನು ಹಚ್ಚಿ ಬೆಳೆಸುವುದು. ಎಮ್ಮೆ ಸಾಕಿದವರಿಗೆ ಎಮ್ಮಲವ ಬೆಡಗಿನವರೆಂದು ಕರೆದುರು. ಔಡಲಗಿಡ ಹಾಕಿದವರು ಔಡಲದವರು, ಬನ್ನಿಗಿಡ ಹಚ್ಚಿದವರು ಬನ್ನಿಲವರು, ಹೀಗೆ ಗಿಡಮರ, ಪಶುಪಕ್ಷಿ, ಹಣ್ಣು, ಹೂವು, ವಿವಿಧ ಮನೆಗಳು, ನದಿ ಹಳ್ಳ, ಗುಡ್ಡ ಬೆಟ್ಟ ದಿನ್ನೆಗಳು ಇವುಗಳ ಸಂಪರ್ಕದಿಂದ ಮತ್ತು ಅಲ್ಲಿ ವಾಸಿಸುವುದರಿಂದ ಮತ್ತು ಇವೆಲ್ಲವುಗಳನ್ನು ಪೂಜಿಸುತ್ತಿದ್ದುದರಿಂದ ಕುಲದಲ್ಲಿ ಈ ಹೆಸರುಗಳನ್ನೇ ಕುಲದ ಬೆಡಗುಗಳನ್ನಾಗಿ ಮಾಡಿಕೊಂಡಂತೆ ಕಾಣುತ್ತದೆ.

**ಕೋಷ್ಟಕ: ೪.೧ ಹೆಳವರ ಬೆಡಗುಗಳು**

| | |
|---|---|
| ಅಂಧಕಲವರು | ಅಚ್ಚೆಲವರು |
| ಅಡಕಿಲರು | ಅರಳಿಕುಲ |
| ಅರಳೆಲೆಯವರು | ಅವರಿಕೆ |
| ಆನೆಕುಲದವರು | ಆನೆಲವರು |
| ಆವಿನಲವರು | ಆರೆಲವರು |
| ಬಂಢಾರದವರು | ಬಂಡಿಯವರು |
| ಬಂಡೇಲರು | ಬಂಗಾರ |
| ಬಸರಿ | ಬನ್ನಿಲವರು |
| ಬಳೆಗಾರದವರು/ ಬಳಿಗಾರಿಲವರು | ಬಣ್ಣಗುಲದವರು |
| ಬ್ರಹ್ಮಲಿಂಗ | ಬ್ಯಾಲನವರು |
| ಬಾಗಲದವರು | ಬಾಳೆಲೆಯವರು |
| ಬಿಳಿಗುರಿಲವರು | ಬುಡಮಲ್ಲಿನವರು |
| ಬೆಳಗೂಗಿನವರು | ಬೇವಿನವರು |

ಬೆಣ್ಣೆಯವರ
ಬೊಟ್ಟು
ಬೋನಸೋಳ
ಭಾಚಿಳಲರು
ಚಿಟಿಮಲ್ಲನವರು
ಚಿನ್ನಿಲವರು
ದನೇಲಪರು
ದಾಸರಿಲವರು
ದೇವಾಲವರು
ಇಮ್ಮಡಿಲವರು
ಗಡ್ಡೆಲವರು
ಗಾಲೇನವರು
ಗೋಪಾಲನವರು
ಹಂಚಿ
ಹನಚಿಲವರು
ಹಾವು
ಹುಲಿನವರು
ಹೆಣ್ಣಿನವರು
ಹೊನ್ನಭೇಜಿಯವರು
ಹೊನ್ನಕಠಾರಿಯವರು
ಹೊನ್ನಕೋರಿಲವರು
ಹೊನ್ನದಾಸ್ಯಾಳದವರು
ಜಂಜಲವರು
ಜಂಗಿನವರು
ಜೊತೆಲರು
ಕಂಬಳೇರ
ಕಂಸನೋಳನೋಲ್
ಕಡ್ಡೇಲವರು
ಕಮ್ಮನೊಳ
ಕಸ್ತೂರಿಲವರು
ಕ್ಯಾಸನೋರು
ಕುಂಚೇಲರು
ಬೆಳ್ಳಿ
ಬೊನ್ನೆಲು
ಬೊಮ್ಮಡದೇವನವರು
ಭೀಮನವರು
ಚಿನ್ನಿಕೋರಿಲವರು
ಚಿಪ್ಪಡಲವರು
ದರ್ಶನಲವರು
ದಿಬ್ಬಕುಲದವರು
ಧಾನ್ಯದವರು
ಇರಲವರು
ಗರಸಿನೊಳ
ಗೀಜಗನವರು
ಗೌಡಲವರು
ಹಂದರಲವರು
ಹಟ್ಟೆಲುವರು
ಹಾಲಿನವರು
ಹೂವಿನವರು
ಹೊನ್ನವೀರಗಂಟೆಯವರು
ಹೊನ್ನಬನ್ನೆಲವರು
ಹೊನ್ನಸಿಂಪಗೆಯವರು
ಹೊನ್ನುಂಗರದವರು
ಹೊನ್ನಗುಲೇಲವರು
ಜಂಗಮಲವರು
ಜಾಡಲವರು
ಜ್ಯೋತಿಲವರು
ಕಂಚಿ
ಕಡಗದವರು
ಕಮಸಾನವರು
ಕಡಹಟ್ಟಿಲವರು
ಕಾಮಲವರು
ಕುರಿಯವರ
ಕೆಂಗುರಿಲವರು

| | |
|---|---|
| ಕೋರಿಲವರು | ಕೊಂಬಿನವರು |
| ಖಡ್ರೋಳ | ಮಧ್ಯಾನ್ಹದವರು |
| ಮಲ್ಲನವರು | ಮಳಕನ್ನೇಲವರು |
| ಮನೆಗಲವರು | ಮಲ್ಲಗಿನವರು |
| ಮಳಶೆಟ್ಟಿಲವರು | ಮಜ್ಜಲನವರು |
| ಮ್ಯಾಕಲವರು | ಮಾರಿಲವರು |
| ಮುರಿಂಡಲವರು | ಮುತ್ತಿನ ಸತ್ತರಗಿಲವರು |
| ಮುಮ್ಮಡಲವರು | ಮೂರಾಹೆಂಡಿನವರು |
| ಮೆಂಗಲವರು | ಮೆಟ್ಟಿಲವರು |
| ನಡವಟ್ಟಿಲವರು | ನೇರಿಲ |
| ಒನೆಕೆಲವರು | ಒರಲವರು |
| ಪಳಸಿದವರು | ಪತ್ರೆಯವರು |
| ಪರ್ವಲವರು | ಪರಸಪತನೊಳು |
| ಪುರಾತನದವರು | ಪೆಟ್ಟಿಗೆಲದವರು |
| ರ್‍ಯಾಸನೊಳು | ರಾಯಣ್ಣದವರು |
| ಸಂಕಲವರು | ಸಂಗಡೂಳ |
| ಸಂಗೊಂಡವರು | ಸರ್ವಲವರು |
| ಸದರಿನವರು | ಸಣ್ಣಕ್ಕಿಲವರು |
| ಸಮೇಲವರು | ಸಾವಂತಲರು |
| ಸಿಪಾರಲವರು | ಶೆಟ್ಟಿನೋರು |
| ಸೋಮಲಿಂಗ | ಸೋಮದೇವರನವರು |
| ಶುಂಠಿಲವರು | ತುಪ್ಪದವರು |
| ತುರಬಿನವರು | ತೆಲಗಾಬತ್ತಲರು |
| ಟಿಂಕಲವದವರು | ಉದರಪಕ್ಕು |
| ಉದಿಲವರು | ಉರಸನ್ನವರು |
| ವಜಮೂನಿಯವರು | ಯಾಪತಲರು |
| ಯಾತಪತ್‌ದವರು | ಯಾಗಸತ್ತೇದವರು |
| ಎಕ್ಕೇಲವರು | ಎಲಿಯವರು |
| ಎಮ್ಮೆಲವರು | |

ಮುಂತಾದ ೧೫೦ಕ್ಕೂ ಹೆಚ್ಚು ಬೆಡಗುಗಳಿಂದ ಈ ಸಮುದಾಯ ಕೂಡಿಕೊಂಡಿದೆ. ಒಂದೇ ಬೆಡಗಿನವರು ರಕ್ತ ಸಂಬಂಧಿಗಳೆಂದು ಅಣ್ಣ ತಮ್ಮಂದಿರು ಎಂದು ಭಾವಿಸುತ್ತಾರೆ. ಈ ಸೂತ್ರ ಈವರೆಗೂ ಮುಂದುವರಿದಿದೆ.

ಹೆಳವರ ಬೆಡಗುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಬೇರೆ ಸಮುದಾಯದ ಜನ ಇವರಲ್ಲಿ ಸೇರ್ಪಡೆಯಾಗಿರುವುದು ಕಂಡುಬರುತ್ತದೆ. ಬೇರೆ ಬೇರೆ ಸಮುದಾಯದ ವರು ವಂಶಾವಳಿ ಹೇಳುವ ವೃತ್ತಿಯಲ್ಲಿ ತೊಡಗಿ ಕಾಲಾಂತರದಲ್ಲಿ ಹೆಳವರಾಗಿರಬೇಕೇನೊ ಎನಿಸುತ್ತದೆ. ಈ ಬೆಡಗುಗಳು ಅಪ್ಪಟ ಬುಡಕಟ್ಟು ಹಿನ್ನೆಲೆಯನ್ನು ಪ್ರತಿಬಿಂಬಿಸುವವು. ಪ್ರಕೃತಿ ಮತ್ತು ಬುಡಕಟ್ಟು ಮೂಲದ ಬೆಡಗುಗಳು ಇವಾಗಿವೆ.

ವಿವಾಹ

**ಆಯ್ಕೆ ಪ್ರಕ್ರಿಯೆ :** ಹೆಳವ ಸಮಾಜದ ಗಂಡಿನವರು ಹೆಣ್ಣು ಹುಡುಕುತ್ತಾರೆ. ಸಮಾಜದ ಹಿರಿಯರು ಮೊದಲಿಗೆ ವಧುವನ್ನು ನೋಡುವರು. ಗಂಡು ಮತ್ತು ಗಂಡಿನ ಮನೆಯವರು ಒಪ್ಪಿದರೆ ಹಾಗೆಯೇ ಹೆಣ್ಣು ಮತ್ತು ಹೆಣ್ಣಿನ ಮನೆಯವರು ಮನೆತನ ನೋಡುವರು. ಹೀಗೆ ಮದುವೆಗೆ ಪರಸ್ಪರ ಎರಡು ಕುಟುಂಬಗಳ ಸಮ್ಮತಿಯೂ ಆವಶ್ಯಕವಾಗಿರುತ್ತದೆ. ಹೆಣ್ಣಿನ ಕಡೆಯವರು ಗಂಡಿನ ಮನೆಗೆ ಬಂದು ಅವರ ದುಡಿಮೆ, ಆಸ್ತಿ, ವಹಿವಾಟು, ಕುಟುಂಬ ಹಾಗೂ ಗಂಡಿನ ನಡತೆ ಬಗ್ಗೆ ಪರಿಶೀಲಿಸಿಕೊಳ್ಳುತ್ತಾರೆ. ಇತ್ತೀಚಿನವರೆಗೂ ಸಹ ಗಂಡಿನ ಮನೆಯವರು ಹೆಣ್ಣಿನ ಮನೆಯವರಿಗೆ ತೆರ ಕೊಡುವ ಪದ್ಧತಿ ಜಾರಿಯಲ್ಲಿತ್ತು. ಕಡಿಮೆ ಪ್ರಮಾಣದ ಜನಸಂಖ್ಯೆಯ ಸಮುದಾಯವಾದ್ದರಿಂದ ಒಳಸಂಬಂಧದಲ್ಲಿ ಹೆಚ್ಚು ಮದುವೆಗಳು ಆಗುತ್ತವೆ. ಆದರೆ ಇತ್ತೀಚೆಗೆ ರಾಜ್ಯದಲ್ಲಿ ಸಮುದಾಯದ ಸಂಘಟನೆ ಹೆಚ್ಚಾಗಿದ್ದರಿಂದ ದೂರದ ಊರುಗಳಿಗೂ ಸಂಬಂಧವನ್ನು ಬೆಳೆಸುತ್ತಿದ್ದಾರೆ.

ಹೆಳವರು ಮೇಲ್ನೋಟಕ್ಕೆ ಒಂದೇ ರೀತಿಯಾಗಿ ಕಂಡರು ಸಹ ಅವರಲ್ಲೆ ಮೇಲಿನ ಅಂತಸ್ತು, ಕೆಳ ಅಂತಸ್ತು ಎಂಬ ಕಲ್ಪನೆ ಇದೆ. ಸಾಧು ಹೆಳವರು, ಗಂಟೆ ಹೆಳವರು, ಎತ್ತಿನ ಹೆಳವರು ಮೇಲ್ ಅಂತಸ್ತು ಹೊಂದಿದ್ದು ಅವರು ಹಂದಿ ಹೆಳವರನ್ನು, ದೂದಿ ಹೆಳವರನ್ನು, ಕೊಕಣಿ ಹೆಳವರನ್ನು ಮತ್ತು ತಂಬೂರಿ ಹೆಳವರೊಂದಿಗೆ ಸಾಮಾನ್ಯವಾಗಿ ಸಂಬಂಧ ಬೆಳೆಸುವುದಿಲ್ಲ. ಇವರ ಬೆಡಗುಗಳು ಬೇರೆ ಬೇರೆಯಾಗಿ ರುವುದರಿಂದ ವಿವಾಹಕ್ಕೆ ಯಾವುದೇ ಅಡಚಣೆ ಇರದಿದ್ದರೂ ಸಹ ಸಾಧು ಹೆಳವರು, ಗಂಟೆ ಹೆಳವರು, ಎತ್ತಿನ ಹೆಳವರು, ವಿವಾಹದ ಸಂದರ್ಭದಲ್ಲಿ ಹಂದಿಹೆಳವರು, ದೂದಿ ಹೆಳವರು, ಕೂಕಣಿ ಹೆಳವರು ಮತ್ತು ತಂಬೂರಿ ಹೆಳವರೊಡನೆ ವೈವಾಹಿಕ ಸಂಬಂಧ ಬೆಳೆಸಲು ಹಿಂಜರಿಯುತ್ತಾರೆ. ಆದರೆ ಇಂದು ಆಧುನಿಕ ಗಾಳಿ ಬೀಸಿರುವು ದರಿಂದ ವರ ಮತ್ತು ವಧುವಿನ ಶಿಕ್ಷಣ ವೃತ್ತಿ ಆರ್ಥಿಕತೆಯನ್ನು ಪರಿಗಣಿಸಿ ವಿವಾಹವನ್ನು ಎಲ್ಲ ಪಂಗಡಗಳಲ್ಲಿ ಏರ್ಪಡುತ್ತಿರುವುದು ಕಂಡುಬರುತ್ತದೆ.

ಗಂಡಿನ ಮತ್ತು ಹೆಣ್ಣಿನ ಮನೆಯವರು ಒಪ್ಪಿದ ನಂತರ ಹೆಣ್ಣಿನ ಮನೆಯಲ್ಲಿಯೇ ನಿಶ್ಚಯ ಕಾರ್ಯಕ್ರಮ ಇಟ್ಟುಕೊಂಡು ಹಿರಿಯರ ಸಮ್ಮುಖದಲ್ಲಿ ಚಿಕ್ಕ ಸಮಾರಂಭ ಏರ್ಪಡಿಸಿ ಗಂಡು ಹೆಣ್ಣು ಕೂರಿಸಿ ನಿಶ್ಚಯ ಕಾರ್ಯಕ್ರಮ ಏರ್ಪಡಿಸುತ್ತಾರೆ. ವೀಳ್ಯೆಯನ್ನು

ಬದಲಿಸಿಕೊಳ್ಳುತ್ತಾರೆ. ಸಕ್ಕರೆ ಹಂಚುತ್ತಾರೆ. ಉತ್ತರ ಕರ್ನಾಟಕದಲ್ಲಿ ಬಾಲ್ಯವಿವಾಹಗಳು ಈಗಲೂ ಚಾಲ್ತಿಯಲ್ಲಿವೆ.

ಇದಕ್ಕೆ ಕುಟುಂಬದ ವೃದ್ಧರು ಮೊಮ್ಮಕ್ಕಳ, ಮರಿಮಕ್ಕಳ ಮದುವೆಯನ್ನು ಜೀವಿತ ಕಾಲದಲ್ಲಿ ನೋಡಬೇಕೆಂಬ ಆಶೆಯೇ ಕಾರಣ. ಸಾಮಾನ್ಯವಾಗಿ ಎಲ್ಲಾ ಮದುವೆಗಳು ಗಂಡಿನ ಮನೆಯಲ್ಲಿ ನಡೆಯುತ್ತವೆ.

ಸೋದರ ಮಾವನೇ ಎಲ್ಲಾ ಮದುವೆಶಾಸ್ತ್ರ ನಡೆಸಿಕೊಡುತ್ತಾನೆ. ವೇದಮಂತ್ರಗಳ ಘೋಷಣೆ ಗೊತ್ತಿಲ್ಲ. ಮದುವೆಯಲ್ಲಿ ಹೆಂಗಸರದೇ ಕಾರುಭಾರು. ಇಡೀ ರಾತ್ರಿ ಶಾಸ್ತ್ರಗಳು ನಡೆಯುತ್ತವೆ. ಅರಿಶಿಣ ಹಚ್ಚುವುದು, ಗಂಗಾಪೂಜೆ, ದೇವರಪೂಜೆ, ಒರಳು ಒನಿಕೆ ಪೂಜೆ, ಮುಂತಾದ ಸಂಪ್ರದಾಯ ಆಚರಣೆಗಳನ್ನು ಮಾಡುತ್ತಾರೆ. ಈಗ ಸಂಪ್ರದಾಯಿಕ ಮದುವೆಗಳು ಕಡಿಮೆ ಆಗಿವೆ. ಮದುವೆಯಲ್ಲಿ ಸಿಹಿಯೂಟ ಇರುತ್ತದೆ. ಮದುವೆ ಕೊನೆಯ ದಿನ ಕೆಲವು ಕುಟುಂಬಗಳಲ್ಲಿ ಮಾಂಸದ ಊಟವೂ ಇರುತ್ತದೆ. ಆದರೆ ಮಧ್ಯ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಎತ್ತಿನ ಹೆಳವರ ಮದುವೆ ಶಾಸ್ತ್ರವನ್ನು ಆಯಾ ಗ್ರಾಮದಲ್ಲಿರುವ ಪಂಚಪೀಠದ ಹಿರೇಮಠ ಮನೆತನದವರೇ ನಡೆಸಿಕೊಡುತ್ತಾರೆ. ಸಂಪ್ರದಾಯ ಶಾಸ್ತ್ರ ಪ್ರಕಾರ ಈ ಮಠದ ಜಂಗಮರೇ ಒಕ್ಕಲುಮನೆಗಳನ್ನು ಪರಿಚಯಿಸುತ್ತಾರೆ. ಈ ಮದುವೆಗಳು ವೀರಶೈವ ವಿಧಿ ವಿಧಾನದಂತೆ ನಡೆಯುತ್ತವೆ.

**ವಿವಾಹ ಪ್ರಕಾರಗಳು**

ಹೆಳವರ ಸಮುದಾಯದಲ್ಲಿ ಏಕಪತ್ನಿತ್ವದ ಬಗ್ಗೆ ಹೆಚ್ಚು ಆಸಕ್ತಿ ಇದೆ. ಆದರೆ ವಿಶೇಷ ಕಾರಣಗಳಿಂದ ಮೊದಲನೇ ಹೆಂಡತಿಗೆ ಮಕ್ಕಳಾಗದಿದ್ದರೆ ಎರಡನೇ ಮದುವೆ ಆಗುವುದುಂಟು. ಆದರೆ ಆ ರೀತಿ ಆಗುವುದು ತುಂಬಾ ಅಪರೂಪ. ಇವರಲ್ಲಿ ಬಹುಪತಿತ್ವ ಬಳಕೆಯಲ್ಲಿ ಇಲ್ಲ.

**ವಿಧವಾ ವಿವಾಹ :** ಇವರಲ್ಲಿ ವಿಧವಾ ವಿವಾಹ ನಡೆಯುತ್ತವೆ. ಬೇರೆ ಬೆಡಗಿನವರು ಒಪ್ಪಿದರೆ ಮೊದಲು ಎಕ್ಕೀಗಿಡಕ್ಕೆ ತಾಳಿ ಕಟ್ಟಿಸಿ ಆಮೇಲೆ ವಿವಾಹ ಮಾಡುತ್ತಾರೆ. ಮುತ್ತೈದೆಯರು ಈ ವಿವಾಹದಲ್ಲಿ ಭಾಗವಹಿಸುವುದಿಲ್ಲ.

ವಿವಾಹದಲ್ಲಿ ಗಂಡಿನ ಸಂಬಂಧಿಕರೆಲ್ಲರೂ ಸೇರುತ್ತಾರೆ. ಸಮುದಾಯದ ಹಿರಿಯರು ಭಾಗವಹಿಸುತ್ತಾರೆ. ಮದುವೆ ನಂತರ ಸಮುದಾಯಕ್ಕೆ ಗಂಡು ಮತ್ತು ಹೆಣ್ಣಿನವರು ಸಣ್ಣ ಮೊತ್ತದ ಹಣವನ್ನು ದೈವಕ್ಕೆ ಕೊಡುತ್ತಾರೆ.

**ವೈವಾಹಿಕ ಸ್ಥಾನಮಾನ**

ಹೆಳವ ಬುಡಕಟ್ಟಿನಲ್ಲಿ ಶೇಕಡ ೪೩.೦೧ ರಷ್ಟು ಜನರು ಅವಿವಾಹಿತರಿರುವರು. ವಿವಾಹಿತ ಶೇ. ೫೨.೪೦ ರಷ್ಟು ಕಂಡುಬಂದರೆ, ವಿಧುರ ವಿಧವೆಯರು ಶೇ. ೪.೪೭ ರಷ್ಟಿದ್ದಾರೆ ಹಾಗೂ ಬೇರ್ಪಟ್ಟ ಕುಟುಂಬಗಳು ಶೇ. ೦.೧೧ರಷ್ಟು ಇರುವುದು ಕಾಣಸಿಗುತ್ತದೆ.

**ಕೋಷ್ಟಕ : ೪.೨**

**ಸಮೀಕ್ಷೆಗೊಳಪಟ್ಟ ಹಕ್ಕಿಪಿಕ್ಕಿ ಸಮುದಾಯದ ವೈವಾಹಿಕ ಸ್ಥಾನಮಾನ (೨೦೦೮)**

| ಸಂ. | ವೈವಾಹಿಕ ಸ್ಥಾನಮಾನ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಅವಿವಾಹಿತರು | ೨೬೬೮ | ೨೦೭೨ | ೪೭೪೦ |
| ೨ | ವಿವಾಹಿತರು | ೨೮೭೬ | ೨೮೯೮ | ೫೭೭೪ |
| ೩ | ವಿಧುರಃವಿಧವೆಯರು | ೬೮ | ೪೨೫ | ೪೯೩ |
| ೪ | ಬೇರ್ಪಡೆಯಾದವರು | ೦ | ೧೨ | ೧೨ |

೫

# ಆರಾಧನೆ ಆಚರಣೆ ನಂಬಿಕೆ

## ಜನನ

ಸಾಮಾನ್ಯವಾಗಿ ಹೆರಿಗೆ ಪೂರ್ವದಲ್ಲಿ ಗರ್ಭಿಣಿ ಸ್ತ್ರೀಯರನ್ನು ಬಹಳಷ್ಟು ಕಾಳಜಿಯಿಂದ ನೋಡಿಕೊಳ್ಳುತ್ತಾರೆ. ಅವರಿಗೆ ಸೀಮಂತ ಕಾರ್ಯಮಾಡಿ ಸಂತೋಷಗೊಳಿಸುತ್ತಾರೆ. ಉಡುಗೆ ತೊಡುಗೆ ತರುತ್ತಾರೆ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಪೌಷ್ಟಿಕ ಆಹಾರವನ್ನು ನೀಡುತ್ತಾರೆ. ಹುಟ್ಟುವ ಮಗು ಆರೋಗ್ಯವಾಗಿರಲೆಂದು ತಾಯಿಯ ಆರೋಗ್ಯದ ಕಡೆ ಹೆಚ್ಚು ಲಕ್ಷ್ಯವಹಿಸುತ್ತಾರೆ. ಆದರೆ ಆಸ್ಪತ್ರೆಗಳಿಗೆ ಹೋಗಿ ಆರೋಗ್ಯ ಪರೀಕ್ಷೆ ಮಾಡಿಕೊಳ್ಳವುದು ತುಂಬಾ ಕಡಿಮೆ. ಸಾಮಾನ್ಯವಾಗಿ ಮೊದಲ ಹೆರಿಗೆಯು ತಾಯಿಯ ಮನೆಯಲ್ಲಿ ಮಾಡಲಾಗುತ್ತದೆ. ಹೆಳವರಲ್ಲಿ ಹಿರಿಯ ಮಹಿಳೆಯರೇ ಪರಿಣಿತ ಸೂಲಗಿತ್ತಿಯರಾಗಿದ್ದು ಅವರು ಹೆರಿಗೆಯನ್ನು ಮಾಡಿಸುತ್ತಾರೆ. ಇತ್ತೀಚೆಗೆ ಸ್ಥಿತಿವಂತ ಹೆಳವರು ಆಸ್ಪತ್ರೆಯ ನೆರವನ್ನು ಪಡೆಯುತ್ತಿದ್ದಾರೆ. ಹೊಕ್ಕಳು ಬಳ್ಳಿಯನ್ನು ಕತ್ತಿಯಿಂದ ಇಲ್ಲವೇ ಹರಿತವಾದ ಕುಡುಗೋಲಿನಿಂದ ಕೊಯ್ದು ಮಾಸವನ್ನು ಯಾರಿಗೂ ಕಾಣದಂತೆ ಊರ ಹೊರಗೆ ಹೋಗಿ ಹುಗಿದು ಬರುತ್ತಾರೆ.

ಹೆರಿಗೆ ಆದ ಮನೆ ಸೂತಕವಾಗಿರುತ್ತದೆ. ಹೆರಿಗೆ ಆದ ಕೂಡಲೆ ಕೊಬ್ಬರಿ, ಉತ್ತತ್ತಿ, ಕಲ್ಲುಸಕ್ಕರೆ, ಬದಾಮಿ, ಬೆಲ್ಲ ಮುಂತಾದ ಪದಾರ್ಥಗಳಿಂದ ತಯಾರಿಸಿದ ಖಾರ ಎನ್ನುವ ಪದಾರ್ಥವನ್ನು ಬಾಣಂತಿಗೆ ನೀಡುತ್ತಾರೆ. ಇವರಲ್ಲಿ ಲಿಂಗಭೇದ ಇರುವುದಿಲ್ಲ. ಹೆಣ್ಣಾಗಲಿ, ಗಂಡಾಗಲಿ ಅಷ್ಟೇ ಸಂತೋಷದಿಂದ ಸ್ವೀಕರಿಸುತ್ತಾರೆ ಮತ್ತು ತೃಪ್ತಿ ಪಡೆದುಕೊಳ್ಳುತ್ತಾರೆ. ತಾಯಂದಿರು ಹೆರಿಗೆ ಆದ ಕೆಲ ದಿನಗಳಲ್ಲಿ ಭಿಕ್ಷಾಟನೆಗೆ, ಕೂಲಿಗಾಗಿ ದುಡಿಯಲು ಹೋಗುತ್ತಾರೆ. ಮಕ್ಕಳನ್ನು ಉಡಿಯಲ್ಲಿ ಕಟ್ಟಿಕೊಂಡು ಊರಿಂದೂರಿಗೆ ಹೋಗುವಾಗ ಈಚಲಗರಿ ಚಾಪೆಯನ್ನು ಹೆಣೆಯುತ್ತಾರೆ. ಅಲ್ಲದೆ ಕೌದಿ ಹೊಲಿಯಲು ಹಳ್ಳಿಗಳನ್ನು ತಿರುಗುತ್ತಾರೆ.

ಹೆರಿಗೆ ಆದ ಮೂರು ತಿಂಗಳವರೆಗೆ ತಾಯಿ ಮತ್ತು ಮಗುವನ್ನು ಆರೈಕೆ ಮಾಡಲಾಗುತ್ತದೆ. ಈ ಅವಧಿಯಲ್ಲಿ ಬಾಣಂತಿ ಕುಂಕುಮ ಬಳೆ ಧರಿಸುವಂತಿಲ್ಲ.

ಹೆರಿಗೆ ಆದ ೫ನೇ ದಿವಸ ಇಡೀ ರಾತ್ರಿ ಮನೆಯಲ್ಲಿ ದೀಪ ಆರಿಸುವಂತಿಲ್ಲ. ಒಂದು ವೇಳೆ ದೀಪ ಆರಿದರೆ ಶೆಟವಿತಾಯಿ ಮಗುವಿನ ಹಣೆಬರಹವನ್ನು ಸರಿಯಾಗಿ

ಬರೆಯುವುದಿಲ್ಲ. ಮುಂದೆ ಜೀವನದಲ್ಲಿ ಮಗುವಿಗೆ ಕಷ್ಟಗಳು ಒದಗುತ್ತವೆ ಎಂಬುದು ಹೆಳವ ಸಮುದಾಯದ ನಂಬಿಕೆ ಆಗಿದೆ.

**ನಾಮಕರಣ :** ಮಕ್ಕಳ ನಾಮಕರಣವು ಹೆಳವ ಸಮುದಾಯದವರಿಗೆ ವಿಶೇಷ ಸಮಾರಂಭ. ಕೆಲವರು ೧೧, ೧೫ ದಿನಗಳಿಗೆ, ಕೆಲವರು ಒಂದು ತಿಂಗಳಿಗೆ ನಾಮಕರಣ ಸಮಾರಂಭ ಇಟ್ಟುಕೊಳ್ಳುತ್ತಾರೆ. ನಾಮಕರಣದಂದು ಬಂಧುಬಳಗದವರು ಬರುತ್ತಾರೆ. ಮನೆಯನ್ನು ಸ್ವಚ್ಛ ಮಾಡಿ ವಿಶೇಷವಾಗಿ ಅಲಂಕಾರ ಮಾಡುವರು. ಆರ್ಥಿಕವಾಗಿ ಚೆನ್ನಾಗಿದ್ದವರು ಕಬ್ಬಿಣದ ತೊಟ್ಟಿಲುಗಳನ್ನು, ಕೆಲವರು ಬಿದರಿನ, ಕೆಲವರು ಈಚಲಗರಿ ತೊಗಟೆಯಿಂದ ಹೆಣೆದ ತೊಟ್ಟಿಲಿನಲ್ಲಿ ನಾಮಕರಣ ಮಾಡುತ್ತಾರೆ. ಇದರಲ್ಲಿ ಸೋದರತ್ತೆಯೇ ನಾಮಕರಣ ಮಾಡುವವಳಾಗಿರುತ್ತಾಳೆ. ತವರಿನವರು ತಂದ ಉಡುಗೆ ತೊಡುಗೆ ಮಗುವಿಗೆ ಹಾಕಿ ಶೃಂಗರಿಸುತ್ತಾರೆ. ಬಾಣಂತಿಯೂ ಹೊಸ ಬಟ್ಟೆ ಧರಿಸುತ್ತಾರೆ. ಮಗುವಿಗೆ ತಮ್ಮ ಕುಟುಂಬದಲ್ಲಿ ತೀರಿಹೋದ ಹಿರಿಯರ ಅಥವಾ ದೇವರ ಹೆಸರು ಇಡುತ್ತಾರೆ. ಮೊದಲು ಸೋದರತ್ತೆ ಮಗುವಿನ ಕಿವಿಯಲ್ಲಿ ಕುಟ್ಟಟೆ ಕುರ್ರ್ ಎಂದು ಐದು ಸಲ ಕೂಗಿ ನಾಮಕರಣ ಮಾಡುತ್ತಾರೆ. ಈ ನಾಮಕರಣ ಸಮಾರಂಭವು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಒಂದೊಂದು ರೀತಿಯಿಂದ ನಡೆಯುತ್ತದೆ. ಉತ್ತರ ಕರ್ನಾಟಕದ ಭಾಗದಲ್ಲಿ ಬಹುಸಂಖ್ಯಾತ ಲಿಂಗಾಯತರ ಆಚರಣೆಯ ಪ್ರಭಾವಕ್ಕೊಳಗಾಗಿ ಈ ಸಮುದಾಯದವರು ಸಹ ಮಠದ ಅಯ್ಯನವರನ್ನು ಕರೆಯಿಸಿ ಮಗುವಿಗೆ ಲಿಂಗಧಾರಣೆ ಮಾಡಿಸುತ್ತಾರೆ. ಆದರೆ ಮಗುವಿಗೆ ನಾಮಕರಣ ಮಾಡುವ ಹಕ್ಕು ಸೋದರತ್ತೆಯದೇ ಆಗಿರುತ್ತದೆ. ಹಳೆ ಮೈಸೂರು ಭಾಗದಲ್ಲಿ ನಾಮಕರಣ ಸಮಾರಂಭಕ್ಕೆ ಬ್ರಾಹ್ಮಣ ಪುರೋಹಿತರನ್ನು ಕರೆಯಿಸಿ ಅವರಿಂದಲೇ ಹೆಸರನ್ನು ಸಹ ಸೂಚಿಸಿಕೊಂಡು ನಾಮಕರಣ ಮಾಡುತ್ತಾರೆ. ಎತ್ತಿನ ಹೆಳವರು ಲಿಂಗಾಯತರ ಪ್ರಭಾವಕ್ಕೆ ಒಳಗಾಗುತ್ತಿದ್ದಾರೆ. ಆದರೆ, ಗಂಟೆ ಹೆಳವರಲ್ಲಿ ಈ ಕಾರ್ಯಗಳನ್ನು ತಮ್ಮ ಸಮುದಾಯದ ಹಿರಿಯರೇ ನಡೆಸಿಕೊಡುತ್ತಾರೆ. ಇಲ್ಲಿ ಲಿಂಗಾಯತರ ಮತ್ತು ಬ್ರಾಹ್ಮಣ ಅರ್ಚಕರ ಪ್ರಭಾವ ಕಾಣಸಿಗುತ್ತಿಲ್ಲ.

**ಋತುಮತಿ :** ಹೆಣ್ಣು ಮಗಳು ಋತುಮತಿ ಆದಾಗ ಮನೆಯಲ್ಲಿ ಸಂಭ್ರಮದ ವಾತಾವರಣ ಉಂಟುಮಾಡುತ್ತದೆ. ಕಾರಣ ಹೊಸ ಜೀವನಕ್ಕೆ ಕಾಲಿಡುವ ಹಾಗೂ ಮದುವೆಯಾಗಿ ತಾಯಿ ಆಗುವ ಅವಕಾಶವನ್ನು ಹೆಣ್ಣು ಇಲ್ಲಿಂದ ಹೊಂದುತ್ತಾಳೆ. ಹೆಣ್ಣು ಮೈನೆರೆಯುವುದನ್ನು ಋತುಮತಿ ಮತ್ತು ದೊಡ್ಡವಳಾಗುವುದು ಎಂದು ಕರೆಯುತ್ತಾರೆ. ಋತುಮತಿ ಆದ ಹೆಣ್ಣನ್ನು ಮನೆಯ ಮೂಲೆಯೊಂದರಲ್ಲಿ ಕೂಡಿಸುತ್ತಾರೆ ಹಾಗೂ ಅವಳನ್ನು ಯಾರೂ ಮುಟ್ಟಿಸಿಕೊಳ್ಳುವುದಿಲ್ಲ. ಅವಳನ್ನು ಅಶುದ್ಧ ಅಥವಾ ಮೈಲಿಗಿ ಆದವಳೆಂದು ಭಾವಿಸುತ್ತಾರೆ. ಋತುಮತಿಯಾದ ಹುಡುಗಿಗೆ ನಿತ್ಯವೂ ಸ್ನಾನ ಮಾಡಿಸುತ್ತಾರೆ. ಆದರೆ ನಾಲ್ಕು ದಿನದ ನಂತರ ಪ್ರತಿದಿನ ಎಣ್ಣೆ ಸ್ನಾನ ಮಾಡಿಸುವರು ಮತ್ತು ಮುತ್ತೈದೆಯರೆಲ್ಲರು ಮಂಗಳಾರತಿ ಮಾಡಿ ಹರಸುತ್ತಾರೆ. ಕೊನೆಗೆ

ಹೆಣ್ಣನ್ನು ಎಬ್ಬಿಸುವ ದಿನದಂದು ಸಂಬಂಧಿಕರನ್ನು ಕರೆಯಿಸಿ ಎಲ್ಲರಿಗೂ ಸಿಹಿ ಊಟ ಮಾಡಿಸುತ್ತಾರೆ. ಅವಳಿಗೆ ಎಲ್ಲಾ ರೀತಿಯ ಅಲಂಕಾರಮಾಡಿ ಹೊಸಬಟ್ಟೆ ಉಡಿಸಿ ಮುತ್ತೈದೆಯರೆಲ್ಲರೂ ಮಂಗಳಾರತಿ ಮಾಡುತ್ತಾರೆ. ಎಷ್ಟೇ ಕಷ್ಟ ಕರ್ಪಾಣ್ಯಗಳಿದ್ದರೂ ಮಗಳ ಮೇಲಿನ ಪ್ರೀತಿ ದ್ಯೋತಕವಾಗಿ ಆರತಿ ಸಮಾರಂಭಗಳನ್ನು ಬಹು ಅಚ್ಚುಕಟ್ಟಾಗಿ ನಡೆಸುತ್ತಾರೆ.

ಸೀಮಂತ ಕಾರ್ಯ

ಹೆಳವರಲ್ಲಿ ಸೀಮಂತ ಕಾರ್ಯ ಮಾಡುವುದಿಲ್ಲ. ಆದರೆ ಇತ್ತೀಚೆಗೆ ಸ್ಥಿತಿವಂತರಾದ ಹೆಳವರು ಸೀಮಂತ ಕಾರ್ಯ ಮಾಡುವಲ್ಲಿ ಉತ್ಸಾಹ ತೋರಿಸುತ್ತಾರೆ. ಬಸುರಿಯಾದ ಐದು ತಿಂಗಳಲ್ಲಿ ಅಥವಾ ಏಳು ತಿಂಗಳಲ್ಲಿ ಸೀಮಂತ ಕಾರ್ಯವನ್ನು ತವರಿನವರು ಬಹುವಿಜೃಂಭಣೆಯಿಂದ ನೆರವೇರಿಸುತ್ತಾರೆ. ಮಗಳಿಗೆ ಶೃಂಗಾರ ಮಾಡಿ ಹೊಸಬಟ್ಟೆ ತೊಡಿಸಿ ಮಂಚ ಅಥವಾ ಕುರ್ಚಿಯ ಮೇಲೆ ಕೂರಿಸುತ್ತಾರೆ. ಮುಂಚೆಯೇ ಅವಳು ಕೂರುವ ಸ್ಥಳದಲ್ಲಿ ಮಂಟಪ ಕಟ್ಟಿರುತ್ತಾರೆ. ಮುತ್ತೈದೆಯರು ಸೋಬಾನ ಹಾಡುಗಳನ್ನು ಹಾಡುತ್ತಾರೆ. ಮಂಗಳಾರತಿ ಮಾಡಿ ಹರಸುತ್ತಾರೆ.

ಮರಣ

ಹೆಳವ ಸಮುದಾಯದವರಲ್ಲಿ ಮರಣದ ನಂತರ ಸ್ವರ್ಗ ನರಕಗಳ ಬಗ್ಗೆ, ದೆವ್ವಗಳ ಬಗ್ಗೆ, ಪಾಪಾಪುಣ್ಯಗಳ ಬಗ್ಗೆ ಬಹಳಷ್ಟು ನಂಬಿಕೆ ಇವೆ.ಉತ್ತರ ಕರ್ನಾಟಕದಲ್ಲಿ ಸತ್ತನಂತರ ಶವವನ್ನು ಮನೆ ಒಳಗಿನಿಂದ ಹೊರಗೆ ತಂದು ಕೂಡಿಸುತ್ತಾರೆ. ಬಂಧುಗಳೆಲ್ಲರೂ ಬರುವವರೆಗೆ ಹೆಣವನ್ನು ಹಾಗೆಯೆ ಇಟ್ಟಿರುತ್ತಾರೆ. ಹೆಣದ ದುರ್ವಾಸನೆ ಕಡಿಮೆ ಆಗಲೆಂದು ಲೋಬಾನದ ಹೊಗೆ ಹಾಕುತ್ತಾರೆ ಇಲ್ಲವೆ ಅತ್ತರ್ ಎಣ್ಣೆ ಸಿಂಪಡಿಸುತ್ತಾರೆ. ಸ್ನಾನ ಮಾಡಿಸಿ ಆದಮೇಲೆ ಕೆಲವರು ಹೊಸಬಟ್ಟೆ ಹಾಕುತ್ತಾರೆ. ಕೆಲವರು ಕಾಲು ಮಡಿಚಿ ಹೆಣ ಮಲಗಿಸುತ್ತಾರೆ. ಸಂಬಂಧಿಕರು, ಅಭಿಮಾನಿಗಳು ಬರುವವರೆಗೂ ಬಹಳಷ್ಟು ಕಾಲ ಹೆಣವನ್ನು ಹಾಗೆಯೇ ಇಟ್ಟಿರುತ್ತಾರೆ. ಮೈ ಮೇಲೆ ಯಾವುದೇ ಚಿನ್ನದ ಒಡವೆಗಳನ್ನು ಹಾಕುವುದಿಲ್ಲ. ಶವಸಂಸ್ಕಾರಕ್ಕೆ ಹೊರಡುವ ಮುಂಚೆ ಅನುಭವಿಕ ಹಿರಿಯರು ಬಿದಿರುಗಳಿಂದ ಶವದ ಚಟ್ಟು ಕಟ್ಟುತ್ತಾರೆ. ಇದು ಸಾಮಾನ್ಯವಾಗಿ ಈ ಸಮುದಾಯದವರು ಸರಳ ರೀತಿಯಲ್ಲಿ ಮಾಡುವ ವ್ಯವಸ್ಥೆ. ತುಸು ಅನುಕೂಲಸ್ಥರು ಕೈವಾಲೆ ತರಿಸಿ ಶೃಂಗಾರಿಸುತ್ತಾರೆ. ಶವದ ಚಟ್ಟ ತಯಾರಾದ ಮೇಲೆ ಶವವನ್ನು ಅಂಗಾತ ಮಲಗಿಸಿ ಸುತ್ತಲೂ ಹೂವಿನಮಾಲೆ ಕಟ್ಟುತ್ತಾರೆ. ಮೈತುಂಬಾ ಹೂಮಾಲೆ ಗಳಿಂದ ಮುಚ್ಚುತ್ತಾರೆ. ನಾಲ್ಕು ಜನರು ಹೋರುತ್ತಾರೆ. ತುಸು ಮುಂದೆ ಮುಂದೆ ಹೋದಂತೆ ಸಂಬಂಧಿಕರು ಹೆಗಲು ಬದಲಿಸುತ್ತಾರೆ. ಪ್ರಾದೇಶಿಕವಾಗಿ ಈ ಸಮುದಾಯದಲ್ಲಿ ಕೆಲವರು ಹೆಣವನ್ನು ಸುಟ್ಟರೆ ಇನ್ನು ಕೆಲವರು ಹೂಳುತ್ತಾರೆ. ಇವರಲ್ಲಿ ಹೆಚ್ಚಾಗಿ ಸತ್ತ ವ್ಯಕ್ತಿಯನ್ನು ಹೂಳುವವರ ಪ್ರಮಾಣವೇ ಹೆಚ್ಚು.

ಕುಣಿಯಲ್ಲಿ ಹಾಕುವವರನ್ನು ಕುಣಿತೆಗೆದು ಆದ ಮೇಲೆ ಪೂರ್ವಕ್ಕೆ ಮುಖಮಾಡಿ ಕೂಡಿಸಿ ಪೂಜಿಸಿ ಆಮೇಲೆ ಬಂದವರೆಲ್ಲರೂ ಮಣ್ಣು ಹಾಕುತ್ತಾರೆ. ಶವಸಂಸ್ಕಾರಕ್ಕೆ

ಹೋದವರು ಕೆರೆ, ಕಟ್ಟೆಗಳಲ್ಲಿ ಸ್ನಾನ ಮಾಡಿ ಮನೆಗೆ ಹೋಗುತ್ತಾರೆ. ಮಹಿಳೆಯರು ಮನೆಯಲ್ಲಿ ದೀಪಹಚ್ಚಿ ಇಡುತ್ತಾರೆ. ಎಲ್ಲರೂ ನಮನ ಸಲ್ಲಿಸುತ್ತಾರೆ. ಶವಸಂಸ್ಕಾರ ಪದ್ಧತಿಗಳು ಸಾಮಾನ್ಯವಾಗಿ ಎಲ್ಲ ಕಡೆಯಲ್ಲೂ ಒಂದೇ ರೀತಿಯಾಗಿವೆ. ಕುಟುಂಬದ ಹಿರಿಯರಾದವರ ಸಮಾಧಿ ಮೇಲೆ ಚಿಕ್ಕದಾದ ಕಲ್ಲಿನಗುಡಿ ಕಟ್ಟುತ್ತಾರೆ. ಈ ರೀತಿ ಕಟ್ಟುವವರು ತಮ್ಮ ಹೊಲಗಳಲ್ಲಿ ಒಂದು ಬದಿಗೆ ಸಮಾಧಿ ಮಾಡುತ್ತಾರೆ.

ಸತ್ತನಂತರ ೩, ೯, ೧೧, ೧೩ ದಿನಕ್ಕೆ ತಮಗೆ ಅನುಕೂಲವಾದ ದಿನದಂದು ಕುಟುಂಬದ ಸದಸ್ಯರು ಸೇರಿ ದೈವದಲ್ಲಿ ಹಾಕಿಕೊಳ್ಳುವ ಅಥವಾ ಒಳಗೆ ತೆಗೆದುಕೊಳ್ಳುವ ಕಾರ್ಯಕ್ರಮ ಮಾಡುತ್ತಾರೆ. ಕೆಲವರು ಒಂದು ವರ್ಷದ ವರೆಗೆ ಮನೆಯಲ್ಲಿ ಯಾವುದೇ ಮದುವೆ ಮುಂತಾದ ಶುಭಕಾರ್ಯಗಳನ್ನು ಇಟ್ಟುಕೊಳ್ಳುವುದಿಲ್ಲ. ನಿಶ್ಚಿತಗೊಳಿಸಿದ ದಿನದಂದು ತಿಥಿ ಆಚರಿಸುತ್ತಾರೆ. ಸಿಹಿ ಅಡುಗೆ ಮಾಡಿ ಸತ್ತವನ ಹೆಸರಿನ ಮೇಲೆ ಆರತಿ ಬೆಳಗಿ ಎಡೆ ಹಿಡಿಯುತ್ತಾರೆ. ಬಂಧುಬಳಗ ಕುಲಸ್ಥರಿಗೆ ಭೋಜನ ಮಾಡಿಸುತ್ತಾರೆ. ಒಂದು ತಿಂಗಳ ಮುಗಿದ ಬಳಿಕ ಸತ್ತವನನ್ನು ದೈವದಲ್ಲಿ ಕೂಡಿಸಿಕೊಳ್ಳುವ ಸಂಪ್ರದಾಯ ವಿದೆ. ಅಂದು ಪುನಃ ಅವನು ಇಷ್ಟಪಡುತ್ತಿದ್ದ ವಸ್ತುಗಳನ್ನು ಇಟ್ಟು ಅವನಿಗೆ ಬೇಕಾದ ಆಹಾರ ತಯಾರಿಸಿ ಎಡೆ ಹಿಡಿಯುತ್ತಾರೆ. ಮೃತನ ಬಂಧುಗಳಿಗೆ ಊಟ ಮಾಡಿಸುತ್ತಾರೆ. ಇದರಿಂದ ಸತ್ತವನು ದೈವದೊಳಗೆ ಬಂರುವನೆಂದು ಇವರ ನಂಬಿಕೆ ಆಗಿದೆ.

**ಧರ್ಮ ಮತ್ತು ದೈವಗಳು**

ಹೆಳವ ಸಮುದಾಯದವರು ವಿಶೇಷವಾಗಿ ಹೆಣ್ಣು ದೈವಗಳನ್ನು ಆರಾಧಿಸುತ್ತಾರೆ. ಚೌಡಮ್ಮ, ಕುಕ್ಕುವಾಡದಮ್ಮ, ಕೆಂಚಮ್ಮ, ಕೊಲ್ಲಾಪುರದಮ್ಮ, ಅಂತರಗಟ್ಟೆಮ್ಮ, ದುರ್ಗಮ್ಮ, ಕಾಳಮ್ಮ, ಜೋಳದಾಳಮ್ಮ ಮುಂತಾದ ದೈವಗಳ ಬಗ್ಗೆ ಬಹಳ ಭಯ ಹಾಗೂ ಭಕ್ತಿಯಿಂದ ನಡೆದುಕೊಳ್ಳುತ್ತಾರೆ ಆ ದೈವಗಳನ್ನು ತೃಪ್ತಿಪಡಿಸಲು ಬಲಿಯಿಂದ ಮಾತ್ರ ಸಾಧ್ಯವೆಂದು ಆಗಾಗ ಕುರಿ ಕೋಳಿ ಬಲಿ ಕೊಟ್ಟು ರಕ್ತ ಸಿಂಪಡಿಸಿ ಪೂಜಾ ಮಾಡುವ ರಲ್ಲದೆ, ಮಾಂಸದ ಅಡುಗೆಯ ನೈವೇದ್ಯ ಸಹ ಮಾಡುತ್ತಾರೆ.

ಇವುಗಳಲ್ಲದೆ ಮೈಲಾರ, ಮಂಜುನಾಥ, ಮಲ್ಲಿಕಾರ್ಜುನ, ಮುಂತಾದ ದೈವಗಳನ್ನು ಸಹ ಆರಾಧಿಸುತ್ತಾರೆ. ಉತ್ತರ ಕರ್ನಾಟಕದಲ್ಲಿ ವೀರಶೈವ ಲಿಂಗಾಯತರ ಪ್ರಭಾವವಿರು ವದರಿಂದ ಶ್ರೀಶೈಲ ಮಲ್ಲಿಕಾರ್ಜುನನ್ನೇ ಕುಲದೈವ ಮಾಡಿಕೊಂಡಿದ್ದಾರೆ. ಈ ಸಮುದಾಯಕ್ಕೆ ಸೇರಿದ ಒಂದು ಮಠವು ಶ್ರೀಶೈಲದಲ್ಲಿ ಇದೆಯೆಂಬ ಪ್ರತೀತಿಯಿದೆ.

**ದೈವ ಸಂಬಂಧಿ ಆಚರಣೆಗಳು, ಪುಣ್ಯಕ್ಷೇತ್ರಗಳು ಮತ್ತು ಪೂಜಾ ವಿಧಾನಗಳು**

ತಾವು ವಾಸಿಸುವ ಹಟ್ಟಿ, ಗ್ರಾಮಗಳಲ್ಲಿರುವ ದೇವರನ್ನು ಪೂಜಿಸುವ ಜೊತೆಗೆ ರೇವಣಸಿದ್ದೇಶ್ವರರನ್ನು, ಸವದತ್ತಿ ಯಲ್ಲಮ್ಮ, ಮಲ್ಲಮ್ಮ ದೈವಗಳನ್ನು ಆರಾಧಿಸುವರು. ಯಲ್ಲಮ್ಮ, ರಾಜರಾಜೇಶ್ವರಿ, ದುರ್ಗಮ್ಮ ದೈವಗಳ ಹೆಸರುಗಳ ಮೇಲೆ ದೇವರಿಗೆ ಬಿಡುವ ಪದ್ಧತಿ ಹಿಂದೆ ಇತ್ತು. ಇತ್ತೀಚೆಗೆ ಜಾಗೃತರಾದ ಯುವಕರು ಈ ಪದ್ಧತಿಯನ್ನು ವಿರೋಧಿಸುತ್ತಾರೆ.

ಉತ್ತರ ಕರ್ನಾಟಕದವರು ಸವದತ್ತಿ ಯಲ್ಲಮ್ಮ ದೇವರಿಗೆ ಮನೆಯಿಂದ ಒಬ್ಬರಾದರೂ ವರ್ಷಕ್ಕೆ ಒಮ್ಮೆ ಹೋಗಿ ಹಣ್ಣು ಕಾಯಿ ಕರ್ಪೂರದಾರುತಿ ಮಾಡಿಸಿ ಬರುತ್ತಾರೆ. ಮದುವೆಗಳಲ್ಲಿ ಯಲ್ಲಮ್ಮ ಹಬ್ಬವನ್ನು ಮೊದಲು ಮಾಡಿ ಕುರಿ ಬಲಿಕೊಟ್ಟ ನಂತರವೇ ಮದುವೆ ಮಾಡುತ್ತಾರೆ. ಸ್ತ್ರೀ ದೇವತೆಗಳ ಹಬ್ಬದಲ್ಲಿ ಕುರಿಕೋಳಿ ಬಲಿಕೊಡುತ್ತಾರೆ ತುಸು ಪ್ರಗತಿಪರರು ಈ ಆಚರಣೆಗಳಿಂದ ದೂರ ಉಳಿದಿರುವುದನ್ನು ಕಾಣಬಹುದು.

**ಧಾರ್ಮಿಕ ಆಚರಣೆ**

ಧಾರ್ಮಿಕತೆಗೆ ಸಂಬಂಧಪಟ್ಟಂತೆ ಮನೆಯಲ್ಲಿ ತಮ್ಮ ತಮ್ಮ ಮನೆದೇವರುಗಳ ಬೆಳ್ಳಿ ಮತ್ತು ಕಂಚಿನ ಮೂರ್ತಿಗಳನ್ನು ಇಟ್ಟುಕೊಂಡಿರುತ್ತಾರೆ. ಪೂಜಾ ಸಾಮಗ್ರಿಗಳನ್ನು ಸಹ ಇಟ್ಟುಕೊಂಡಿರುವುದಲ್ಲದೆ, ತಮಗೆ ಇಷ್ಟಬಂದ ದೇವರುಗಳ ಪೋಟೋ ಸಹ ಹಾಕಿಕೊಂಡಿರುತ್ತಾರೆ.

**ದೇವದಾಸಿ ಪದ್ಧತಿ**

ಮಹಾಭಾರತ ಕಾಲದಲ್ಲಿ ಕರ್ಣ ಕ್ಷತ್ರಿಯನಲ್ಲ ನಿಜ. ಹೀನ ಕುಲದಲ್ಲಿ ಹುಟ್ಟಿದನೆಂದು ಕೃಪನ ಮಾತಿನ ಹಿಂದಿನ ಧ್ವನಿ. ಕರ್ಣ ಹೀನಜಾತಿಯನೆಂಬ ಕಾರಣದಿಂದ ಬಾಲ್ಯದಿಂದ ಹಿಡಿದು ಜೀವನವೆಲ್ಲಾ ಅಪವಾದ ಅವಮಾನ ಅನುಭವಿಸಬೇಕಾಯಿತು.

ಹರ್ಷವರ್ಧನನ ಪೂರ್ವಜರ ಸಮುದಾಯದಲ್ಲಿ ವರ್ಣಾಶ್ರಮ ವ್ಯವಸ್ಥೆಯು ಪುನಃ ಪ್ರಾಬಲ್ಯವನ್ನು ಪಡೆಯಿತು. ಉಚ್ಚ ನೀಚ, ಶ್ರೇಷ್ಠ, ಅಧಮ, ಸ್ಪೃಶ್ಯ, ಅಸ್ಪೃಶ್ಯ ಎಂಬ ಭಾವನೆಗಳು ಹೆಚ್ಚಲಾರಂಭಿಸಿದವು. ಇವುಗಳು ಹರ್ಷವರ್ಧನನ ಕಾಲದಲ್ಲಿ ಸ್ತ್ರೀಯರ ಪರಿಸ್ಥಿತಿ ಶೋಚನೀಯವಾಗಿತ್ತು. ರೋಮಿಲಾ ಥಾಪರ್ ಅವರ ಪ್ರಕಾರ ಉತ್ತರ ಭಾರತದಲ್ಲಿ ಸತಿಪದ್ಧತಿ, ದಕ್ಷಿಣಭಾರತದಲ್ಲಿ ದೇವದಾಸಿ ಪದ್ಧತಿ ಆಚರಣೆ ಯಲ್ಲಿದ್ದವು. ಅನೇಕ ದೇವಾಲಯಗಳಲ್ಲಿ ದೇವರ ಸೇವೆಗಾಗಿ ದೇವದಾಸಿಯರಿದ್ದರು. ಬಳ್ಳಾರಿ ಸುಂಕಪ್ಪ ಹೆಳವರು ಹಾಗೂ ಸುಂಕಣ್ಣ ಹೆಳವರು ತಿಳಿಸುವಂತೆ ಹುಲಿಗೆಮ್ಮ ದೇವಿಯ ಹೆಸರಿನಲ್ಲಿ ದೇವದಾಸಿ ಬಿಡುತ್ತಿದ್ದರು ಎಂದು ತಿಳಿದುಬರುತ್ತದೆ. ಈ ಸಮುದಾಯದಲ್ಲಿ ಕೆಲವು ಕುಟುಂಬಗಳು ದೇವದಾಸಿ ಪದ್ಧತಿ ಅನುಸರಿಸುತ್ತಿದ್ದುದರಿಂದ ಆ ಕುಟುಂಬಗಳಿಗೆ ದೇವದಾಸಿ ಮನೆತನಗಳೆಂದು ಕರೆಯಲಾಗುತ್ತಿತ್ತು. ಈ ಪರಂಪರೆ ಬಿಜಾಪುರ, ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿತ್ತು.

ಕೊಪ್ಪಳ ಜಿಲ್ಲಾ ಯಲಬುರ್ಗಾ ತಾಲ್ಲೂಕು ತಳಕಲ್ಲಿನಲ್ಲಿರುವ ಹೆಳವ ಸಮುದಾಯದ ಸುಮಾರು ಇಪ್ಪತ್ತು ಮನೆಗಳ ಹಿರಿಯರ ಹೆಸರಿಗೆ ತಂದೆಯ ಬದಲು ತಾಯಿಯ ಹೆಸರನ್ನೇ ಹೇಳಲಾಗುತ್ತದೆ. ಉದಾಹರಣೆ ಬಸಪ್ಪ ಗಂಗಮ್ಮ ಹೆಳವರ ಅಂತಾ ಇರುವುದು ಪ್ರತಿ ಕುಂಟಬವೂ ದೇವದಾಸಿ ಪದ್ಧತಿಗೆ ಹೊಂದಿಕೊಂಡಿದ್ದು ಶ್ರೀ ನಿಂಗಪ್ಪ ಮಾಸ್ತರರು ಹಾಗೂ ಸಮುದಾಯದ ಹಿರಿಯರಾದ ಶ್ರೀ ಬಸಪ್ಪ ಹೆಳವರ ಇವರಿಂದ ತಿಳಿಯಿತು.

## ೬

## ಒಳಾಡಳಿತ

### ಕುಲಪಂಚಾಯತಿ ಸ್ವರೂಪ ತೀರ್ಮಾನಗಳು

ಹೆಳವ ಸಮುದಾಯವು ತನ್ನದೇ ಆದ ಕಟ್ಟುಪಾಡುಗಳನ್ನು ಸಾಮಾಜಿಕವಾಗಿ ಇಟ್ಟುಕೊಂಡಿದ್ದು ತಾವು ವಾಸ ಇರುವ ಸ್ಥಳಗಳಲ್ಲಿ ಸಮುದಾಯದಲ್ಲಿ ಒಬ್ಬ ಕಟ್ಟೆಮನೆಗೌಡ, ಇಬ್ಬರು ಬುದ್ಧಿವಂತರು, ಒಬ್ಬ ಭಂಡಾರಿ, ಒಬ್ಬ ಕೋಲಕಾರ ಈ ರೀತಿ ಐದು ಜನರ ಸಮಿತಿ ಇದ್ದು ಸಮುದಾಯದ ಆಗು ಹೋಗುಗಳನ್ನು ನೋಡಲು ಭಾಗಿಗಳಾಗಿದ್ದು ಸಮಾಜದ ಗಂಭೀರವಲ್ಲದ ಸಣ್ಣಪುಟ್ಟ ವ್ಯಾಜ್ಯಗಳನ್ನು ಅವರೇ ತೀರ್ಮಾನ ಮಾಡುತ್ತಾರೆ. ಸಮುದಾಯದವರು ಆ ತೀರ್ಮಾನವನ್ನು ಒಪ್ಪಿಕೊಳ್ಳುವ ಮೂಲಕ ಗೌರವಪೂರ್ವಕ ಸ್ವೀಕರಿಸುತ್ತಾರೆ. ಕೆಲವು ಕುಟುಂಬಗಳು ವ್ಯತಿರಿಕ್ತವಾಗಿ ನಡೆದುಕೊಂಡರೆ ಅಂತಹ ಕುಟುಂಬಗಳಿಗೆ ಸಾಮಾಜಿಕ ಬಹಿಷ್ಕಾರವನ್ನು ಹಾಕುವ ಪದ್ಧತಿ ಈಗಲೂ ಇದೆ. ಸಣ್ಣ ಅಲ್ಪಸಂಖ್ಯಾತ ಸಮುದಾಯವಾಗಿದ್ದರಿಂದ ಸಾಮಾಜಿಕ ಬಹಿಷ್ಕಾರ ಬಹಳ ಪರಿಣಾಮ ಕಾರಿಯಾಗಿರುತ್ತದೆ. ಇವರಲ್ಲಿಯ ಬಹಿಷ್ಕಾರ ಮುಂತಾದ ತೀರ್ಮಾನಗಳು ಕೆಲವು ಸಲ ಬೇರೆ ಬೇರೆ ಸ್ಥಳಗಳಲ್ಲಿ ವಾಸಿಸುವ ಈ ಸಮುದಾಯದವರು ಬಹಿಷ್ಕಾರ ಮುಂತಾದ ತೀರ್ಮಾನಗಳನ್ನು ಜಾರಿಗೊಳಿಸುತ್ತಾರೆ. ಆದರೆ ಈಗ ಅಷ್ಟೊಂದು ತೀವ್ರತರವಾಗಿಲ್ಲ. ಈ ಸಮುದಾಯದವರು ಒಂದು ರೀತಿಯಲ್ಲಿ ಬೇರೆ ಸಮುದಾಯ ಗಳನ್ನೇ ಅವಲಂಬಿಸಿದ್ದರಿಂದ ಪರಾವಲಂಬಿಗಳು ಆಗಿದ್ದು, ಕರೆದವರ ಕೂಸು ಇದ್ದ ಹಾಗೆ ಆಗಿದ್ದಾರೆ. ಬೇರೆ ಸಮುದಾಯಗಳ ಕಟ್ಟುನಿಟ್ಟುಗಳಿಗೆ ಒಳಪಟ್ಟು ಜೀವನ ಸಾಗಿಸುತ್ತಿದ್ದಾರೆ. ತಮ್ಮತನವನ್ನು ಉಳಿಸಿಕೊಂಡಿದ್ದಾರೆ.

ಕುಲಪಂಚಾಯತಿಯಲ್ಲಿ ಎಲ್ಲರ ಅಹವಾಲುಗಳನ್ನು ತಿಳಿದುಕೊಂಡು ಪಂಚಾಯತಿ ತೀರ್ಮಾನವಾಗುತ್ತದೆ. ಸಾಮಾನ್ಯವಾಗಿ ಆರು ಕೊಟ್ಟರೆ ಅತ್ತೆ ಕಡೆಗೆ, ಮೂರು ಕೊಟ್ಟರೆ ಸೊಸೆ ಕಡೆಗೆ ಎಂಬ ನ್ಯಾಯ ಪಂಚಾಯತಿ ಈ ಸಮುದಾಯದಲ್ಲಿ ಅಷ್ಟೊಂದು ಕಂಡುಬರುವುದಿಲ್ಲ. ನ್ಯಾಯ ಪಂಚಾಯತಿ ಒಂದು ಸ್ಥಳದಲ್ಲಿ ವಾಸಿಸುವ ಇಡೀ ಸಮೂಹದ ಒಪ್ಪಿಗೆಯನ್ನು ಸೂಚಿಸುವುದರಿಂದ ಸಾಮಾನ್ಯವಾಗಿ ಧರ್ಮ ನ್ಯಾಯವಾಗಿರುತ್ತದೆ.

ಸಮಾಜ ದ್ರೋಹವಾಗದಂತೆ ಕಟ್ಟಳೆಗಳನ್ನು ಜಾರಿಗೊಳಿಸಲಾಗುತ್ತದೆ. ಇತ್ತೀಚೆಗೆ

ಅಸ್ತಿತ್ವದಲ್ಲಿ ಬಂದಿರುವ ಭಜನಾಮಂಡಳಿ, ಯುವಕ ಸಂಘಗಳು, ಸ್ತ್ರೀಶಕ್ತಿ ಸಂಘಗಳು, ಸ್ತ್ರೀ ಸ್ವಸಹಾಯ ಗುಂಪುಗಳು ಮತ್ತು ಶಾಲಾಭಿವೃದ್ಧಿ ಸಂಸ್ಥೆಗಳು, ಅಲ್ಲದೆ ಸಮುದಾಯದ ಸಂಘಟನೆಗಳು ಸಹ ಸಮಾಜದ ನ್ಯಾಯ ತೀರ್ಮಾನದಲ್ಲಿ ಹೆಚ್ಚು ಉಪಯೋಗವಾಗುತ್ತವೆ. ರಾಜಕೀಯ ಮತ್ತು ಇತರೆ ಸಂಘಟನೆಗಳ ಕಾರ್ಯರೂಪಗಳಲ್ಲಿ ಈ ಸಮುದಾಯ ತೀರಾ ಗೌಣ. ಕಾರಣ ಬೆರಳಿನಿಂದ ಎಣಿಸುವಷ್ಟು ಮತದಾರರು, ಅಲ್ಲದೆ ಊರಿಂದೂರಿಗೆ ಅಲೆಯುವ ಅಲೆಮಾರಿಗಳು ಪಟೇಲರ ಪುಸ್ತಕದಲ್ಲಿಯೂ ಇಲ್ಲ. ಶ್ಯಾನಭೋಗದರ ಲೆಕ್ಕದಲ್ಲೂ ಇಲ್ಲ.

ಪ್ರತಿಷ್ಠೆ ಎನ್ನುವ ಶಬ್ದವನ್ನೇ ಅರಿಯದ ಈ ಸಮುದಾಯಕ್ಕೆ ಸಾಮಾಜಿಕ ಪ್ರತಿಷ್ಠೆ ಮತ್ತು ಸ್ಥಾನಮಾನಗಳ ಬಗ್ಗೆ ಚಿಂತಿಸುವ ಅರ್ಹತೆಯೂ ಅವರಿಗಿರುವುದಿಲ್ಲ. ಅವೆಲ್ಲಾ ಬಹು ಸಮುದಾಯದ ಶ್ರೀಮಂತರ ಸೊತ್ತುಗಳು. ಆದರೆ ಈ ಸಮುದಾಯದವರು ತಮ್ಮ ತಮ್ಮ ಒಕ್ಕಲುಮನೆಗಳಿಂದ ಮತ್ತು ಒಳ್ಳೆಯ ನಡತೆಯಿಂದ ಗೌರವ ಸಂಪಾದಿಸ ದಿದ್ದರೂ ಗೌರವ ಎಂಬ ಪದಕ್ಕೆ ಅರ್ಹರಾಗದಿದ್ದರೂ ತಿರಸ್ಕೃತರಲ್ಲ.

ಸಾಮಾಜಿಕ ಸುಧಾರಣೆ ಮತ್ತು ಸಮಾಜ ಕಲ್ಯಾಣ ರಾಜ್ಯದಲ್ಲಿ ಬೇರೆ ಸಮುದಾಯ ಗಳಿಗೆ ಅಷ್ಟೇ ಏಕೆ ಪರಿಶಿಷ್ಟ ಜಾತಿಗಳ ಪಟ್ಟಿಗಳಲ್ಲಿರುವ ಭೋವಿ, ಬಣಜಾರ, ಕೊರಮ, ಹೊಲೆ ಮಾದಿಗ ಮತ್ತು ಪರಿಶಿಷ್ಟ ಪಂಗಡಗಳಲ್ಲಿರುವ ಬೇಡ, ನಾಯಕ, ಇವರನ್ನು

ಸಮುದಾಯದ ಹೆಣ್ಣು ಬೇರೆ ಜಾತಿಯ ಗಂಡಿನೊಂದಿಗೆ ದೈಹಿಕ ಸಂಪರ್ಕವಿರಿಸಿ ಕೊಂಡರೆ, ವಿಧವೆ ವಿವಾಹವಾಗದೆ ಪರ ಪುರುಷನೊಂದಿಗೆ ಸಂಬಂಧ ಬೆಸೆದುಕೊಂಡಿದ್ದರೆ ಅಂಥವರನ್ನು ಸಮುದಾಯದಿಂದ ಬಹಿಷ್ಕಾರಿಸಲಾಗುತ್ತದೆ.

ಸಾಮಾನ್ಯವಾಗಿ ಸಭ್ಯರಾಗಿಯೇ ನಡೆದುಕೊಳ್ಳುವ ಹೆಳವರು ಒಮ್ಮೊಮ್ಮೆ ಚಪ್ಪಲಿ ಯಿಂದ ಹೊಡೆದಾಡಿದರೆ, ಅವಾಚ್ಯ ಶಬ್ದವನ್ನು ನುಡಿದರೆ ಅಂಥವರಿಗೆ ಪಂಚಾಯಿತಿ ಯಲ್ಲಿ ಬಹಿಷ್ಕಾರ ಹಾಕಿ ತಪ್ಪುŒ ದಂಡ ವಿಧಿಸಲಾಗುತ್ತದೆ.

ಬಹಿಷ್ಕೃತ ವ್ಯಕ್ತಿಗಳು ಮರಳಿ ಜಾತಿಗೆ ಸೇರಬೇಕೆಂದರೆ ದೈವದವರು ವಿಧಿಸುವ ತಪ್ಪು ದಂಡ ನೀಡಿ ಶುದ್ಧತೆಗೆ ಒಳಗಾದ ತರುವಾಯ ಜಾತಿಯೊಳಗೆ ಮರಳಿ ಕರೆದು ಕೊಳ್ಳಲಾಗುತ್ತದೆ. ಆಧುನಿಕ ಸಂದರ್ಭದಲ್ಲಿ ಮೊದಲಿನಷ್ಟು ಬಿಗಿಯಾಗಿ ನ್ಯಾಯ ಪಂಚಾಯಿತಿಗಳು ನಡೆಯದೇ ಇದ್ದರೂ ಇನ್ನು ಪೂರ್ಣ ಜೀವವನ್ನು ಕಳೆದುಕೊಂಡಿಲ್ಲ ಎನ್ನಬಹುದು.

# ೭

# ಆರ್ಥಿಕ ಜೀವನ

ಹೆಳವರಲ್ಲಿ ಕುಲಕಸುಬುಗಳು, ಉಪಕಸುಬುಗಳು ಪ್ರತ್ಯೇಕವಾಗಿಲ್ಲ. ಸುಗ್ಗಿ ಸಮಯ ದಲ್ಲಿ ಒಕ್ಕಲು ಮನೆಗಳಿಗೆ ಹೋಗಿ ದವಸಧಾನ್ಯ, ಪಾತ್ರೆಪಗಡೆ ವಸ್ತುಗಳನ್ನು ದಾನ ರೂಪದಲ್ಲಿ ಪಡೆದುಕೊಳ್ಳುತ್ತಿದ್ದರಿಂದ ಹೊಟ್ಟೆಪಾಡು ನಡೆದು ಹೋಗುತ್ತಿತ್ತು. ಇದರಿಂದ ಆಸ್ತಿ ಮಾಡುವ, ಹೊಲಮನೆ ಮಾಡುವ ಗೋಜಿಗೇ ಹೋಗಲಿಲ್ಲ. ಅಲೆಮಾರಿಗಳಾಗಿ, ಸಂಚಾರಿಗಳಾಗಿಯೇ ಉಳಿದು ತಮ್ಮ ಜೀವನ ನಡೆಸುತ್ತಾ ಬಂದರು. ಆದರೆ ಅಂದಿನ ಸ್ಥಿತಿ ಈಗಿಲ್ಲ. ಇತ್ತೀಚೆಗೆ ವಂಶಾವಳಿ ಬರೆಯಿಸುವುದು ದಾನ ಕೊಡುವುದು ನಿಂತು ಹೋಗಿ ಹೆಳವ ಸಮಾಜದ ಸ್ಥಿತಿ ಚಿಂತಾಜನಕವಾಗಿದೆ. ಹೆಳವರ ಕುಟುಂಬಗಳು ಚಕ್ಕಡಿ ಬಂಡಿಗಳನ್ನು ಕಟ್ಟಿಕೊಂಡು ಗುಳೇ ಹೋಗುವುದನ್ನು ಊರೂರು ತಿರುಗಿ ಭಿಕ್ಷೆ ಬೇಡುವುದನ್ನು ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಎಲ್ಲ ಜಿಲ್ಲೆಗಳಲ್ಲಿ ಕಾಣಬಹುದಾಗಿದೆ. ಇದೇ ಈ ಜನರ ಮುಖ್ಯ ಕಸುಬಾಗಿದೆ.

ಆಹಾರ ಕ್ರಮಗಳಲ್ಲಿ ಬದಲಾವಣೆ ಇಲ್ಲ. ಮಾಂಸಹಾರಿಗಳು, ರಾಗಿ, ಜೋಳ, ಮುಖ್ಯ ಆಹಾರಗಳು. ಉತ್ತರ ಕರ್ನಾಟಕದಲ್ಲಿ ಸ್ಥಳೀಯ ಸಮಾಜದ ಕಟ್ಟುಪಾಡುಗಳಿಗೆ ಅನುಸರಿಸಿ ಸಸ್ಯ ಆಹಾರಿಗಳಾಗಿದ್ದಾರೆ. ಇವರು ಬಹಳ ಸರಳ ಜೀವಿಗಳು. ಆಡಂಬರ ಜೀವನ ನಡೆಸುವಂತಿಲ್ಲ. ಏಕೆಂದರೆ ದಿನದ ಹೊಟ್ಟೆಪಾಡಿಗಾಗಿ ಒಕ್ಕಲು ಮನೆಯವರು ಕೊಟ್ಟ ಆಹಾರಧಾನ್ಯಗಳಿಂದ ನಡೆಯಬೇಕಾದ್ದರಿಂದ ಸೂಕ್ಷ್ಮತೆಯಲ್ಲಿ ತಮ್ಮ ಜೀವನಪಾಡು ನಡೆಸಿಕೊಳ್ಳುತ್ತಾರೆ.

ಲೋಹಿಯಾ ಅವರು ಈ ರಾಷ್ಟ್ರದ ಆಸ್ತಿಯಲ್ಲಿ ಆಯಾ ಜನಸಂಖ್ಯೆಯ ಶೇಕಡಾವಾರು ಆಧಾರದ ಮೇಲೆ ಹಂಚಿಕೆ ಆದಾಗ ಮಾತ್ರ ಸಮಾಜದಲ್ಲಿ ಸಮಾನತೆ ಬರುತ್ತೆ ಎನ್ನುವ ವಾದ ಈ ಸಮುದಾಯಗಳಿಗೆ ಅನ್ವಯಿಸುವುದಿಲ್ಲ. ಏಕೆಂದರೆ ಶೇಕಡಾ ೯೦ ರಷ್ಟು ಕುಟುಂಬಗಳಿಗೆ ಬೆಲೆಯುಳ್ಳ ಸ್ಥಿರಾಸ್ಥಿಗಳೇ ಇರುವುದಿಲ್ಲ.

ಸ್ವಾತಂತ್ರ್ಯ ದೊರೆತು ಆರು ದಶಕಗಳು ಕಳೆದರೂ ಅತ್ಯಂತ ಹಿಂದುಳಿದ ವರ್ಗಗಳು ಅಲೆಮಾರಿ ಸಮುದಾಯದವರ ಯಾದಿಗಳು, ರಾಜ್ಯಪತ್ರ, ಸರ್ಕಾರಿ ಆದೇಶಗಳಲ್ಲಿ ಉಳಿದವೇ ಹೊರತು ಮೂಲಭೂತ ಸೌಕರ್ಯ ಕಲ್ಪಿಸಿಕೊಳ್ಳದೇ ಸಾಮಾಜಿಕ, ಶೈಕ್ಷಣಿಕ,

ರಾಜಕೀಯ, ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಏನೂ ಪ್ರತಿಫಲ ದೊರಕಿಸಿಕೊಳ್ಳಲಿಲ್ಲ. ದುಡಿಯಲು ಕನಿಷ್ಠ ಭೂಮಿ ಹಂಚಿಕೆಯನ್ನು ಕೂಡ ಮಾಡಲು ಸರ್ಕಾರ ಮುಂದೆ ಬರಲಿಲ್ಲ. ಈ ಜನರ ಆರ್ಥಿಕತೆಯ ಅಭಿವೃದ್ಧಿ ಆಗಲಿಲ್ಲ.

**ಪಶುಪಾಲನೆಗೆ ಸರ್ಕಾರಿ ಸೌಲಭ್ಯಗಳು**

ಎತ್ತಿನ ಹೆಳವರು ತನ್ನ ನಿತ್ಯ ಕಾಯಕಗಳೊಂದಿಗೆ ದನಪಾಲನೆ, ಹಂದಿ ಹೆಳವರು ಹಂದಿಗಳ ಪಾಲನೆಯಲ್ಲಿ ತೊಡಗಿಸಿಕೊಂಡಿರುವರು. ಪಶುಪಾಲನೆಗಾಗಿ ಈವರೆಗೂ ಸರ್ಕಾರ ಸಹಾಯ ಸೌಲಭ್ಯಗಳನ್ನು ಕೊಟ್ಟಿರುವುದಿಲ್ಲ. ಹಾಲು ಉತ್ಪಾದಕರ ಸಹಕಾರಿ ಸಂಘವನ್ನು ಇವರಿಗಾಗಿ ರಚಿಸಿಲ್ಲ. ಇತ್ತೀಚೆಗೆ ಡಿ ದೇವರಾಜ ಅರಸು ಅಭಿವೃದ್ಧಿ ನಿಗಮದವರು ಹೈನುಗಾರಿಕೆ ಮತ್ತು ಇತರೆ ಸಾಲಗಳನ್ನು ಕೊಡುವ ಯೋಜನೆ ರೂಪಿಸಿದ್ದಾರೆ. ಆದರೆ, ಅಲೆಮಾರಿಗಳಾದ ಇವರಿಗೆ ಈ ಯೋಜನೆಗಳನ್ನು ಸಮರ್ಪಕವಾಗಿ ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಈ ದಿಶೆಯಲ್ಲಿ ಸರ್ಕಾರ ಈಗಲಾದರೂ ಗಮನ ಹರಿಸುವದೆಂದು ನಂಬಲಾಗಿದೆ.

**ಲಿಂಗವಾರು ಕೆಲಸಗಾರರು**

ಹೆಳವರ ಪುರುಷರು ಮತ್ತು ಮಹಿಳೆಯರು ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಕಾರ್ಮಿಕರಾಗಿ ಕೂಡಿಯೇ ಕೆಲಸ ಮಾಡುತ್ತಾರೆ. ಪ್ರತ್ಯೇಕವಾಗಿ ಕೃಷಿ ಕೆಲಸ ಮಡುವ ವ್ಯವಸ್ಥೆ ಇರುವುದಿಲ್ಲ. ಹಳ್ಳಿಗಳಲ್ಲಿ ಕೂಲಿಯ ಕೆಲಸವೇ ಮುಖ್ಯ ಉದ್ಯೋಗವಾಗಿದೆ. ಪಟ್ಟಣ ಪ್ರದೇಶಗಳಲ್ಲಿ ವಾಸಿಸುವವರು ಹಮಾಲಿ ಕೆಲಸವನ್ನು ಮಾರುಕಟ್ಟೆಯಲ್ಲಿ ಮಾಡುತ್ತಾರೆ. ಹತ್ತಿ ಜಿನಿಂಗ್ ಮಿಲ್‌ಗಳಿಗೆ ಮಹಿಳೆಯರು ಕೆಲಸಕ್ಕೆ ಹೋಗುತ್ತಾರೆ. ಕೆಲವರು ತಮ್ಮ ಮೂಲವೃತ್ತಿ ಒಕ್ಕಲು ಮನೆಗಳಿಗೆ ಭಿಕ್ಷಾಟನೆಗೆ ಹೋಗುತ್ತಾರೆ. ತಮ್ಮ ಪೂರ್ವಿಕರ ಕೆಲಸದ ಜೊತೆಗೆ ಅಲ್ಪಸ್ವಲ್ಪ ಜಮೀನು ಇದ್ದವರು. ವ್ಯವಸಾಯ ಮಾಡಿಕೊಂಡಿದ್ದು ಉಳಿದವರು ಕೃಷಿಕಾರ್ಮಿಕರಾಗಿ ಕೂಲಿ ಕೆಲಸ ಮಾಡುತ್ತಿದ್ದಾರೆ. ಕೆಲವರು ಕಾಫಿ ತೋಟಗಳಲ್ಲಿ ಕೆಲಸಕ್ಕೆ ಉಳಿದಿದ್ದಾರೆ. ಗೋವಾ, ಮಹಾರಾಷ್ಟ್ರಗಳಿಗೆ ಗುಳೆ ಹೋಗುವುದು ಇಂದಿಗೂ ನಡೆದಿದೆ.

**ಮೂಲ ಕಸುಬು** : ಸಾಂಪ್ರದಾಯಿಕ ಕಸುಬಾದ ಒಕ್ಕಲು ಮನೆಗಳಿಗೆ ಹೋಗಿ ಅವರ ಮನೆತನದ ಹಿಂದಿನ ಇಂದಿನ ವಂಶಾವಳಿ ಹೇಳುವುದು, ಹೊಗಳುವುದು, ಭಿಕ್ಷಾಟನೆ ಮಾಡುವುದು ಇವರ ಮೂಲ ವೃತ್ತಿಯಾಗಿದೆ. ಅಲ್ಲದೆ ಒಕ್ಕಲುಮನೆತನದ ವಂಶಾವಳಿಯನ್ನು ಹೊಗಳಿದ ನಂತರ ಹೀಗೆ ಹರಕೆ ಕೊಡುತ್ತಾರೆ.

೧. ಮುತ್ತ್ಯಾ ಶಂಕರಪ್ಪನ ಸಂತಾನ ಬೆಳೀಲಿ
ನೂರಾ ಒಂದು ಬಳ್ಳಿ ಹಬ್ಬಲಿ
ಪಂಚಾಕ್ಷರಿ ಗುರುವಿನ ಪಾದ ಇಟ್ಟಲ್ಲಿ
ಒಂದಕ್ಕೆ ಸಾವಿರವಾಗಲಿ
ಸಾವರಕ್ಕೆ ಸತ್ಯವಾನವರಾಗಲಿ ನೂರಕ್ಕೆ ಧರ್ಮರಾಜರಾಗಲಿ

ಆಡೋ ಮಕ್ಕಳಾಗಲಿ
ತೂಗೋ ತೊಟ್ಟಿಲವಾಗಲಿ
ಪಲ್ಲಕ್ಕಿ ಪಯಣವಾಗಿ
ಆಗಿನ ಯಾಲಕ್ಕಿ ಬಂದು
ಮುಗ್ಗೊ ತುಪ್ಪ...
ಮುನ್ನೂರು ವರ್ಷ ಘನವಾಗಲಿ
ಪಂಚೈದು ಮಂದಿ ಹೆಣ್ಣುಮಕ್ಕಳಾಗಲಿ
ಹೆಳವ ಹೆಣ್ಣುಮಗಳ ಹರಿಕೆ
ಪಂಚವಾದ್ಯಗಂಟೆ ಹರಿಕೆ... (ನಾಗೇಗೌಡ, ಎಚ್ ಎಲ್:೨೦೦೫:೬-೭).

೨. ಹಾಲು ಸಾಗರವಾಗಲಿ
ಬೆಣ್ಣೆ ಬೆಟ್ಟವಾಗಲಿ
ಹಿಡಿದ ಕಾರ್ಯ ಸಿದ್ಧಿಯಾಗಲಿ
ಬಂದ ಚಿಂತೆ ದೂರವಾಗಲಿ
ನಿಮ್ಮ ವಂಶ ಉದ್ಧಾರವಾಗಲಿ
ನಿಮ್ಮ ವಂಶ ಹೆಚ್ಚಾಗಲಿ

ಆದರೆ, ಇಂದಿನ ಜಾಗತೀಕರಣ ವ್ಯವಸ್ಥೆಯಲ್ಲಿ ಇವರ ಮೂಲ ವೃತ್ತಿ ಬಹಳಷ್ಟು ನಿಂತು ಹೋಗಿದ್ದರಿಂದ ಅವರ ಜೀವನವೇ ಏರುಪೇರಾಗಿ ಅತಂತ್ರ ಸ್ಥಿತಿಯಲ್ಲಿದ್ದಾರೆ.

ಕೇಂದ್ರ ಮತು ರಾಜ್ಯ ಸರ್ಕಾರ ಅಲೆಮಾರಿ ಸಮುದಾಯಗಳಿಗೆ ವಿಶೇಷ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ಹಲವಾರು ವರ್ಷಗಳಿಂದ ಕೈಬಿಟ್ಟಿದೆ. ಹೀಗಾಗಿ ಅಲೆಮಾರಿ ಸಮುದಾಯಗಳ ಅಭಿವೃದ್ಧಿ ಕುಂಠಿತವಾಗಿದೆ. ಮಹಾರಾಷ್ಟ್ರ ಮಾದರಿಯಲ್ಲಿ ಯೋಜನೆಗಳನ್ನು ರೂಪಿಸಿ ಕೇಂದ್ರ ಸರ್ಕಾರದಿಂದ ಅಲೆಮಾರಿ ಸಮುದಾಯಗಳಿಗೆ ಹಣ ನೀಡಿದಲ್ಲಿ ಅನುಕೂಲವಾಗುವುದು.

ಪಾರಂಪರಿಕ ಕಸುಬನ್ನೇ ನಂಬಿರುವ ಈಗಿನ ಬದಲಾವಣೆಯ ಸಮಾಜದಲ್ಲಿ ಜೀವನ ಮಾಡುವ ಮಾರ್ಗಕ್ಕೆ ಸರ್ಕಾರವೇ ದಾರಿತೋರಿಸಬೇಕಾಗಿದೆ. ಪರ್ಯಾಯ ವ್ಯವಸ್ಥೆ ಇಲ್ಲದೆ ಹೋದರೆ ಜೀವಂತ ಹೆಣಗಳಾಗಿ ಇರುವ ದೌರ್ಭಾಗ್ಯ ಇವರದಾಗುವುದು. ಇಂದಿಗೂ ಬೆಂಗಳೂರು, ಗೋವಾ, ಮುಂಬಾಯಿಗಳಿಗೆ ದಿನಿನಿತ್ಯವು ಹತ್ತಾರು ಜನರಾದರೂ ಜೀವನಕ್ಕಾಗಿ ಕೆಲಸ ಮಾಡಲು ಗುಳೇ ಹೋಗುತ್ತಿದ್ದಾರೆ.

ಇವರು ಜೀತಪದ್ಧತಿಗೆ ಮಾರು ಹೋಗಿಲ್ಲ. ಕೇವಲ ಕೂಲಿ ಕೆಲಸ ಹುಡುಕಿಕೊಂಡು ಹೋಗುತ್ತಾರೆ. ಹೆಚ್ಚಾಗಿ ದಿನಗೂಲಿ ಮೇಲೆಯೇ ಅವಲಂಬಿತ ಇರುವುದರಿಂದ ಕೂಲಿಕಾರರು ಮತ್ತು ಮಾಲೀಕರ ಒಳ್ಳೆಯ ಬಾಂಧವ್ಯ ಇರುವುದಿಲ್ಲ. ದಿನಗೂಲಿ ಮೇಲೆ ಕೆಲಸ ಮಾಡುತ್ತಿರುವ ಇವರಿಗೆ ಸರ್ಕಾರ ಆಹಾರಕ್ಕಾಗಿ ಕೂಲಿ ಯೋಜನೆ ಅಡಿಯಲ್ಲಿ ಆಹಾರಧಾನ್ಯ ಹಣ ನೀಡಲಾಗುತ್ತಿದೆ.

ಸುಗ್ಗಿ ಸಮಯದಲ್ಲಿ ಒಕ್ಕಲು ಮನೆಗಳಿಗೆ ಹೋಗಿ ದವಸಧಾನ್ಯ, ಪಾತ್ರೆಗಳಾದ ವಸ್ತುಗಳನ್ನು ದಾನ ರೂಪದಲ್ಲಿ ಪಡೆದುಕೊಳ್ಳುತ್ತಿದ್ದುದರಿಂದ ಹೊಟ್ಟೆಪಾಡು ನಡೆದು ಹೋಗುತ್ತಿತ್ತು. ಇದರಿಂದ ಆಸ್ತಿ ಮಾಡುವ ಗೋಜಿಗೇ ಹೋಗಲಿಲ್ಲ. ಈ ಕಾಳಜಿ ವಹಿಸದ್ದರಿಂದ ಅಲೆಮಾರಿಗಳಾಗಿ ಸಂಚಾರಿಗಳಾಗಿಯೇ ಉಳಿದು ತಮ್ಮ ಜೀವನ ನಡೆಸುತ್ತಾ ಬಂದರು. ಈಗ ದಾನ ಕೊಡುವುದು ನಿಂತಿರುವ ಫಲವಾಗಿ ಕೆಲಸಕ್ಕಾಗಿ ಪರದಾಡುವ ಹಾಗೂ ಗುಳೆ ಹೋಗುವುದನ್ನು ಉತ್ತರ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಕಾಣಬಹುದು.

ಸಮುದಾಯದವರ ವೃತ್ತಿ ಸಂಬಂಧಿಯಲ್ಲಿ ಕೂಲಿಕಾರರನ್ನು ನಿಯಮಿಸುವ ಸಂದರ್ಭ ಉದ್ಭವಿಸುವುದಿಲ್ಲ. ಅಂಬಲಿ ಕುಡಿಯುವವನಿಗೆ ಮೀಸೆ ತಿಕ್ಕುವವನೊಬ ಎಂದು ತಿಳಿಸುವ ಗಾದೆಯಂತೆ ಭಿಕ್ಷಾಟನೆ ಮಾಡುವವನಿಗೆ ಕೂಲಿಕಾರರನ್ನು ನಿಯಮಿಸಿ ಕೊಳ್ಳುವುದು ಹೇಗೆ ಸಾಧ್ಯ.

ಚಿಕ್ಕ ಚಿಕ್ಕ ಸಣ್ಣ ಜಮೀನು ಹೊಂದಿದವರು ಗಂಗಾಕಲ್ಯಾಣ ಯೋಜನೆ ಅಡಿಯಲ್ಲಿ ಕೊಳವೆ ಬಾವಿ ತೆರೆದ ಬಾವಿಗಳ ನೀರಿನ ಮೂಲದಿಂದ ತರಕಾರಿ ಇತರೆ ಬೆಳೆದು ಉಪಜೀವನ ಮಾಡುತ್ತಿದ್ದಾರೆ. ರಾಜ್ಯದಲ್ಲಿ ಯಾವ ಒಬ್ಬನೂ ಸಹ ಭೂಮಿ ಮತ್ತು ಎಸ್ಟೇಟ್ ಹೊಂದಿಲ್ಲ.

ಡಿ ದೇವರಾಜ ಅರಸು ಅಭಿವೃದ್ಧಿ ನಿಗಮದಿಂದ ಜಮೀನು ಹೊಂದದ ಈ ಸಮುದಾಯದವರಿಗೆ ನಿಗಮದಿಂದ ಜಮೀನು ಎರಡು ಎಕರೆ ಖರೀದಿಸಿ ಕೊಡುವ ಯೋಜನೆ ಇದ್ದು ಭೂಮಿಯ ಮಾರುಕಟ್ಟೆ ಬೆಲೆ ಈಗ ಹೆಚ್ಚಾಗಿದ್ದು ಹಿಂದಿನ ಯೋಜನೆ ಆದೇಶದ ಪ್ರಕಾರ ಜಮೀನು ಸಿಗುವಂತಿಲ್ಲ. ಸದ್ಯದ ಮಾರುಕಟ್ಟೆಯ ಬೆಲೆಗೆ ಹೊಂದಿ ಭೂಮಿಯ ದರ ಆದೇಶ ಬದಲಾಗಬೇಕು. ಈ ಹಿಂದೆಯೂ ಯಾರಿಗೂ ಕೊಟ್ಟಿರುವ ಯಾವ ದಾಖಲೆಗಳು ಇಲ್ಲ. ಭೂಮಿ ಹೊಂದಿರುವವರ ಸಂಖ್ಯೆಯೇ ಕಡಿಮೆ ಇರುವುದರಿಂದ ಹೆಚ್ಚಾಗಿ ಆಹಾರ ಉತ್ಪಾದನೆ, ಬೀಜೋತ್ಪಾದನೆ ಗಳನ್ನು ಮಾಡಲು ಹೇಗೆ ಸಾಧ್ಯವಾದೀತು.

**ಕೃಷಿ ಉಪಕರಣಗಳು ಮತ್ತು ಬೇಸಾಯ ಪದ್ಧತಿಗಳು**

ಸಣ್ಣ ಪ್ರಮಾಣದ ಭೂಹಿಡುವಳಿದಾರ ರೈತರಿಗೆ ರಂಟೆ, ಕುಂಟೆ, ಗುದ್ದಲಿ, ಸಲಕೆ ಎತ್ತು ಚಕ್ಕಡಿಗಳನ್ನು ಉಚಿತವಾಗಿ ಕೊಡಿಸುವ ಯೋಜನೆಗೆ ಸರ್ಕಾರದ ಆದೇಶವಿದ್ದರೂ ಈ ಸಮುದಾಯದ ಸಣ್ಣ ಭೂಹಿಡುವಳಿದಾರ ರೈತರಿಗೆ ದೊರೆಯದೆ ಇರುವುದು ಆಶ್ಚರ್ಯ ಮೂಡಿಸಿದೆ. ಸರ್ಕಾರ ಈ ಬಗ್ಗೆ ಗಮನ ಹರಿಸಿದರೆ ಅಭಿವೃದ್ಧಿಗೆ ಮಾರ್ಗ ಸರಳವಾಗುತ್ತದೆ. ಈ ಚಿಕ್ಕ ಪ್ರಮಾಣದ ಭೂಮಿಯನ್ನು ಹೊಂದಿರುವ ರೈತರು ತಾವು ಬೆಳೆದ ಆಹಾರ ಉತ್ಪನ್ನಗಳನ್ನು ತನ್ನ ಇನ್ನಿತರ ಜೀವನೋಪಾಯದ ವಸ್ತುಗಳ ಖರ್ಚಿಗಾಗಿ ಮಾರಾಟವನ್ನು ಮಾಡಿ ಇನ್ನುಳಿದ ಉತ್ಪನ್ನಗಳಾದ ಧಾನ್ಯಗಳನ್ನು ಚೀಲಗಳಲ್ಲಿ ತುಂಬಿ ತಮ್ಮ ಉಪಯೋಗಕ್ಕಾಗಿ ರಕ್ಷಿಸಿಕೊಳ್ಳುತ್ತಾರೆ. ಹೆಚ್ಚು ಭೂಮಿಯನ್ನು

ಹೊಂದಿಲ್ಲವಾದ್ದರಿಂದ ಪಾರಂಪರಿಕ ಕೃಷಿ ಪದ್ಧತಿಯಲ್ಲಿ ಕಾರ್ಯ ಮಾಡುತ್ತಾ ಹೊಸ ಹೊಸ ಬೇಸಾಯ ಪದ್ಧತಿಗಳನ್ನು ಅಳವಡಿಸಿ ಕೊಂಡಿರುವುದಿಲ್ಲ. ನದಿ, ಸಮುದ್ರ, ಬೆಟ್ಟಗಳ ಬಗ್ಗೆ ದೈವೀ ಭಾವನೆಯನ್ನು ಹೊಂದಿರುತ್ತಾರೆ. ಪತ್ರೆ, ಬೇವು, ಆಲ, ಅರಳಿ, ಬನ್ನಿ ಮರಗಳನ್ನು ಕಂಡಲ್ಲಿ ಪೂಜಿಸುತ್ತಾರೆ. ಈ ಬಗ್ಗೆ ಅಪಾರವಾದ ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. ಎತ್ತು, ಗೋವುಗಳನ್ನು ದೇವರೆಂದೇ ಭಾವಿಸಿ ಪೂಜಿಸುತ್ತಾರೆ.

**ಆಶ್ರಿತರ ವಯೋಗುಂಪು**

ಸರ್ಕಾರವು ೦–೧೭ರ ವಯೋಮಾನದವರನ್ನು ನೇಮಕಾತಿಗೆ ಅನರ್ಹವೆಂದು ಭಾವಿಸುತ್ತದೆ. ಹಾಗೆ ೬೦ವರ್ಷಕ್ಕಿಂತ ಮೇಲ್ಪಟ್ಟವರು ಕೆಲಸ ಮಾಡಲು ಸಾಧ್ಯವಾಗದ ಅಸಾಹಯಕರೆಂದು ಪರಿಗಣಿಸಲಾಗುತ್ತದೆ. ಹೆಳವರಲ್ಲಿ ೦–೧೭ರೊಳಗಿನವರ ಪ್ರಮಾಣ ೩೭.೮೩ ಇದೆ. ಹಾಗೇ ೬೦ ವರ್ಷಕ್ಕಿಂತ ಮೇಲ್ಪಟ್ಟವರ ಪ್ರಮಾಣವು ೫.೯೦ ರಷ್ಟಿದೆ. ಅಂದರೆ ಕಾಯಕಾರ್ಹವಲ್ಲದ ಗುಂಪಿನ ಪ್ರಮಾಣವು ೪೩.೭೩ ಎಂದು ತಿಳಿದುಬರುತ್ತದೆ. ಇವರನ್ನು ಅವಲಂಬಿತ ಗುಂಪೆಂದು ಪರಿಗಣಿಸಲಾಗಿದೆ.

**ಕೋಷ್ಟಕ: ೭.೧ ಸಮೀಕ್ಷೆಗೊಳಪಟ್ಟ ಹೆಳವರಲ್ಲಿ ಆಶ್ರಿತರ ವಯೋಗುಂಪು**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೧೭ ವಯಸ್ಸಿನ ಗುಂಪು | ೨೧೭೧ | ೧೯೮೮ | ೪೧೫೯ |
| ೬೧ ವರ್ಷ ಮೆಲ್ಪಟ್ಟವರ ಗುಂಪು | ೩೨೩ | ೩೨೮ | ೬೫೧ |

**ಕಾಯಕಾರ್ಹ ವಯೋಗುಂಪು**

೧೮–೬೦ರ ವಯೋಮಾನದೊಳಗಿನವರನ್ನು ಕಾಯಕಾರ್ಹ ಗುಂಪೆಂದು ಪರಿಗಣಿಸಲಾಗಿದೆ. ಅಂಥವರು ಹೆಳವರಲ್ಲಿ ೫೬.೨೭ರ ಪ್ರಮಾಣದಲ್ಲಿದ್ದಾರೆ. ಕಾಯಕಾರ್ಹರಲ್ಲಿ ಪುರುಷರು ೫೫.೫೫, ಹಾಗೂ ಮಹಿಳೆಯರು ೫೬.೯೮ರ ಪ್ರಮಾಣದಲ್ಲಿದ್ದಾರೆ.

**ಕೋಷ್ಟಕ: ೭.೨ ಸಮೀಕ್ಷೆಗೊಳಪಟ್ಟ ಹೆಳವರ ಕಾಯಕಾರ್ಹ ವಯೋಗುಂಪು**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೧೮–೪೦ ವಯಸ್ಸಿನ ಗುಂಪು | ೨೩೪೧ | ೨೪೦೬ | ೪೭೪೭ |
| ೪೧–೬೦ ವಯಸ್ಸಿನ ಗುಂಪು | ೭೭೭ | ೬೭೫ | ೧೪೫೨ |

**ಹೆಳವರಲ್ಲಿ ವಿವಿಧ ಕೆಲಸಗಳಲ್ಲಿ ತೊಡಗಿಕೊಂಡವರ ಪ್ರಮಾಣ**

ಹೆಳವ ಸಮುದಾಯದಲ್ಲಿ ೧೮ ರಿಂದ ೪೦ ವಯೋಗುಂಪಿನವರನ್ನು ವಿಶೇಷವಾಗಿ ಕಾಯಕರ್ಹ ಮತ್ತು ಪ್ರಜನನರ್ಹ ಗುಂಪೆಂದು ಪರಿಗಣಿಸಲಾಗಿದೆ. ಇವರಲ್ಲಿಯ ವಿವಿದ ವೃತ್ತಿಗಳನ್ನು ಅವಲಂಬಿಸಿರುವರು ಹೀಗಿದ್ದಾರೆ. ಕೃಷಿಕರು ಶೇ. ೫.೦೨, ಕೃಷಿ

ಕಾರ್ಮಿಕರು ಶೇ. ೭೨.೮೩, ಸರ್ಕಾರಿ ನೌಕರರು ೦.೫೮ ಇದ್ದಾರೆ. ಶೇ. ೧.೫೩ ವ್ಯಾಪರಸ್ತರು, ಶೇ. ೧೨.೦೧ ಧಾರ್ಮಿಕ ಬಿಕ್ಷಕರು ಹಾಗೂ ಶೇ. ೮.೦೬ ರಷ್ಟು ಇತರೆ ಕೆಲಸಗಳಾದ ಪೊರಕೆ, ಚಾಪೆ ಹೆಣೆಯುವುದು, ದೂದಿ ಮಾರಾಟ, ಬುಟ್ಟಿ ಹೆಣೆಯುವುದು, ಪ್ಲಾಸ್ಟಿಕ್ ಆಯುವುದು, ನಾಟಿ ಔಷಧಿ, ಕೂಕಣಿ ತೆಗೆಯುವುದು, ಹಂದಿಸಾಕಣಕೆ ಹೀಗೆ ಮುಂತಾದ ಕೆಲಸಗಳಲ್ಲಿ ತೊಡಗಿರುವುದು ಕಂಡುಬರುತ್ತದೆ.

ಕೋಷ್ಟಕ: ೭.೩ ಸಮೀಕ್ಷೆಗೊಳಪಟ್ಟ ಹೆಳವರು ವಿವಿಧ ಕೆಲಸಗಳಲ್ಲಿ ತೊಡಗಿಕೊಂಡವರ ಪ್ರಮಾಣ (೨೦೦೭)

| ವಿವರ | ಪುರುಷ | ಸ್ತ್ರೀ | ಒಟ್ಟು |
|---|---|---|---|
| ಕೃಷಿಕರು | ೧೭೪ | ೧೪೦ | ೩೧೪ |
| ಕೃಷಿಕಾರ್ಮಿಕರು | ೨೪೨೦ | ೨೧೩೨ | ೪೫೫೨ |
| ಸರಕಾರಿ ನೌಕರರು | ೨೬ | ೭ | ೩೩ |
| ವ್ಯಾಪರಸ್ತರರು | ೫೬ | ೪೦ | ೯೬ |
| ಧಾರ್ಮಿಕ ಭಿಕ್ಷುಕರು | ೪೫೨ | ೨೯೯ | ೭೫೧ |
| ಇತರೆ ಉದ್ಯೋಗಿಗಳು | ೨೯೪ | ೨೧೦ | ೫೦೪ |
| | ೩೪೨೨ | ೨೮೨೮ | ೬೨೫೦ |

## ಆಹಾರ ಮತ್ತು ಉಡುಗೆ

ಹೆಳವರು ರಾಗಿ, ಜೋಳಗಳನ್ನು ಮುಖ್ಯ ಆಹಾರವಾಗಿ ಉಪಯೋಗಿಸುತ್ತಾರೆ. ದಿನನಿತ್ಯ ಅಕ್ಕಿ ಉಪಯೋಗಿಸುತ್ತಿದ್ದರೂ ಹಬ್ಬ ಹರಿದಿನ ಮತ್ತು ಇತರೆ ದಿನಗಳಲ್ಲಿ ಊಟದ ವ್ಯವಸ್ಥೆಯಲ್ಲಿ ಬದಲಾವಣೆಯನ್ನು ಕಾಣುತ್ತೇವೆ.

ಉಡುಗೆಗಳು ತೀರಾ ಸರಳ. ಅಂಗಿ ಧೋತರ ಒಕ್ಕಲುಮನೆಯವರು ದಾನವಾಗಿ ನೀಡಿದ ಬಟ್ಟೆ, ಕೋಟು, ತಲೆಗೆ ರುಮಾಲು ಹೆಗಲಮೇಲೆ ಕೆಂಪು ಶ್ಯಾಲು ಆ ಶ್ಯಾಲಿನಲ್ಲಿ ಒಕ್ಕಲಮನೆ ಕಡತಗಳನ್ನು ಕಟ್ಟಿಕೊಂಡಿರುತ್ತಾರೆ. ಇವರನ್ನು ನೋಡಿದ ಕೂಡಲೆ ಹೆಳವ ಎಂದು ಗುರುತಿಸುತ್ತಾರೆ.

ಮಹಿಳೆಯರು ಸೀರೆ, ರವಿಕೆ ಇಲ್ಲವೆ ಕುಬುಸ ತೊಡುತ್ತಾರೆ. ಕೈತುಂಬಾ ಬಳೆಗಳು ಯಾವಾಗಲೂ ಹಣೆಗೆ ವಿಭೂತಿ ಕುಂಕುಮ ಧರಿಸುತ್ತಾರೆ. ಹೆಣ್ಣುಮಕ್ಕಳು ಬಹಳ ಶ್ರಮಜೀವಿಗಳು. ಅಲೆಮಾರಿಗಳಾಗಿ ಅಲೆದಾಡುವುದರಿಂದ ಚಕ್ಕಡಿಗಳೇ ವಾಸದ ಮನೆಗಳಾಗುವವು. ಗ್ರಾಮದಲ್ಲಿ ವಾಸಿಸುವವರು ಗುಡಿಸಲು ಮತ್ತು ಇತ್ತೀಚಿಗೆ ಸರ್ಕಾರದ ಆಶ್ರಯಮನೆಗಳನ್ನು ಹೊಂದಿರುವವರು ಅಂತಹ ಮನೆಗಳಲ್ಲಿ ವಾಸ ಮಾಡುತ್ತಾರೆ. ಮುಂದುವರೆದ ಕೆಲವರು ಹಂಚಿನಮನೆ ಕಟ್ಟಿಸಿಕೊಂಡು ಅದರಲ್ಲಿ ವಾಸಿಸುತ್ತಿದ್ದಾರೆ.

ದೇವರುಗಳ ಪೂಜೆ ಪುರಸ್ಕಾರ, ಹಬ್ಬ ಹರಿದಿನಗಳಲ್ಲಿ, ಮದುವೆ ಮುಂಜಿಗಳಲ್ಲಿ ಮತ್ತು ಶವಸಂಸ್ಕಾರಗಳಲ್ಲಿ ಇಡೀ ಸಮುದಾಯ ಒಟ್ಟಾಗಿ ಜವಾಬ್ದಾರಿಯಿಂದ ಕೆಲಸ ಮಾಡುತ್ತದೆ.

**ಗಂಟೆ ಹೆಳವರು :** ಈ ಸಮುದಾಯದಲ್ಲಿ ಗಂಟೆ ಹೆಳವರು ಸಹ ಹೆಚ್ಚಿನ ಜನಸಂಖ್ಯೆಯಲ್ಲಿ ಹೆಚ್ಚಾಗಿ ಹಳೆ ಮೈಸೂರು ಭಾಗದ ಜಿಲ್ಲೆಗಳಲ್ಲಿ ಕಂಡುಬರುತ್ತಿದ್ದು ಅವರೆಲ್ಲರ ಮಾತೃಭಾಷೆ ತೆಲುಗು ಆಗಿದ್ದು ಅವರು ಪಾದಚಾರಿಗಳಾಗಿದ್ದು ಬೆಳಗಿನ ಜಾವದಲ್ಲಿಯೇ ಗಂಟೆ ಹಿಡಿದುಕೊಂಡು ತನ್ನ ಬರುವಿಕೆಯನ್ನು ತಿಳಿಸಲು ಗಂಟೆ ಬಾರಿಸುತ್ತಾ ಮನೆ ಮನೆಗೆ ಹೋಗಿ ಹೊಗಳಿ ಹರಸಿ ದೇವರ ನಾಮಗಳನ್ನು ಹೇಳಿ ಭಿಕ್ಷೆ ಪಡೆಯುತ್ತಾರೆ. ಇವರು ತಮ್ಮ ಒಕ್ಕಲು ಮನೆಗಳ ವಂಶಾವಳಿಯನ್ನು ಬರೆದು ಕೊಳ್ಳುತ್ತಾರೆ. ಉಳಿದ ಮನೆಗಳಲ್ಲಿ ಹಾಗೆ ಭಿಕ್ಷೆ ಬೇಡುತ್ತಾರೆ. ಇವರು 'ಗಂಟೆ ಹೆಳವರು' ಎಂದೇ ಪ್ರಸಿದ್ಧವಾಗಿದ್ದಾರೆ. ಜಾನಪದ ಹಾಡುಗಾರಿಕೆಯಲ್ಲಿ ಪರಿಣಿತಿ ಪಡೆದಿರುತ್ತಾರೆ.

**ರೋಗಗಳು :** ಹೆಚ್ಚಾಗಿ ಹೆಳವರು ಮಲೇರಿಯಾದಿಂದ ಬಳಲುತ್ತಿರುತ್ತಿರುವುದು ಕಂಡುಬರುತ್ತದೆ. ಆದರೆ ಈ ಸಮುದಾಯದಲ್ಲಿ ಮುಂದುವರಿದವರ ಹೊರತಾಗಿ ಯಾರೂ ಸಕ್ಕರೆಕಾಯಿಲೆ, ರಕ್ತ ಒತ್ತಡ ಇಂತಹ ಕಾಯಿಲೆಗಳಿಗೆ ತುತ್ತಾಗಿರುವುದಿಲ್ಲ. ಆದರೆ ಈಗಿನ ದಿನಗಳಲ್ಲಿ ಬೀಡಿ ಸೇದುವವರೇ ಹೆಚ್ಚಾಗಿ ಅದರಲ್ಲೂ ಉತ್ತರ ಕರ್ನಾಟಕ ಭಾಗಗಳಲ್ಲಿ ಚಿಲುಮೆಗೆ ಹೊಗೆಸೊಪ್ಪು ತುಂಬಿ ಅದರ ಮುಖಾಂತರ ಸೇದುವುದರಿಂದ ದಮ್ಮು, ಕೆಮ್ಮು, ಅಸ್ಥಮಾ ಕಾಯಿಲೆಗಳಿಂದ ಬಳಲುತ್ತಿದ್ದಾರೆ. ಮಕ್ಕಳಿಗೆ ಪೌಷ್ಠಿಕ ಆಹಾರ ಕೊರತೆಯಿಂದ ಬಳಲುತ್ತಿರುವುದು ಕಂಡುಬರುತ್ತಿದೆ.

ಕೆಲವು ಮರಣಾಂತಿಕ ರೋಗಗಳಿಗೆ ಮತ್ತು ಕಾಯಿಲೆಗಳ ಸ್ವರೂಪ ಗೊತ್ತಾಗದಿದ್ದರೆ ಈ ಸಮುದಾಯದವರು ಈಗಲೂ ಸಹ ದೇವರನ್ನು ಹೊರಡಿಸುವುದು, ಮಾಟಮಂತ್ರ ಮಾಡಿಸುವುದು, ದೇವರಿಗೆ ಹರಕೆ ಹಾಕುವುದು ಮೊದಲಾದ ಕ್ರಮಗಳಲ್ಲಿ ತೊಡಗುತ್ತಾರೆ. ಈ ಸಮುದಾಯದಲ್ಲಿ ಕೆಲವರು ನಾಟಿ ವೈದ್ಯರಾಗಿದ್ದು ಹಳ್ಳಿಗಳಿಂದ ಹಳ್ಳಿಗೆ ಹೋಗಿ ಔಷಧಿ ಕೊಟ್ಟು ಚಿಕಿತ್ಸೆ ಮಾಡುತ್ತಿರುತ್ತಾರೆ.

ಕೆಲವರು ಚರ್ಮ ರೋಗದ ಕಾಯಿಲೆಗಳಲ್ಲಿ ಚಿಕಿತ್ಸೆ ನೀಡುವಲ್ಲಿ ಪ್ರಸಿದ್ಧಿಯನ್ನು ಪಡೆದಿರುತ್ತಾರೆ. ಈ ಸಮುದಾಯದ ಮಂದಾಲೆ ಹೆಳವರಂತೂ ನಾಟಿ ವೈದ್ಯಕೀಯವನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಕೊಳ್ಳೇಗಾಲ, ಮಹದೇಶ್ವರ ಬೆಟ್ಟ ಸಮೀಪ ವಾಸಿಸುವ ಈ ಸಮುದಾಯದವರು ಮಾಟಗಾರರೆಂದೇ ಹೆಸರು ಮಾಡಿದ್ದಾರೆ. ತಮ್ಮ ಮಂತ್ರ ತಂತ್ರಗಳಿಂದ ಜನರಲ್ಲಿ ನಂಬಿಕೆ ಉಂಟು ಮಾಡಿದ್ದಾರೆ. ಈಗ ಅದೇ ಅವರ ವೃತ್ತಿಯಾಗಿದೆ. ಆಧುನಿಕ ವೈದ್ಯಕೀಯ ಪದ್ಧತಿಯ ಬಗ್ಗೆ ಈ ಸಮುದಾಯದವರಲ್ಲಿ ಈಗ ಸಾಕಷ್ಟು ಪ್ರಜ್ಞೆಯುಂಟಾಗಿದೆ. ವೈದ್ಯರಿಂದ ಚಿಕಿತ್ಸೆ ಮಾಡಿಸಿಕೊಳ್ಳಬೇಕೆಂಬ ಭಾವನೆ ಉಂಟಾಗಿದೆ. ಈ ವಿಷಯದಲ್ಲಿ ಮೂಢನಂಬಿಕೆ ಕಡಿಮೆಯಾಗುತ್ತಿದೆ.

## ೮

# ಸಾಹಿತ್ಯ ಮತ್ತು ಭಾಷೆ

**ಸಾಹಿತ್ಯ :** ಕನ್ನಡ ಭಾಷೆಯಲ್ಲಿಯೇ ಇವರ ಮಾತು, ವ್ಯವಹಾರ ಇರುವುದರಿಂದ ಕನ್ನಡವೇ ಇವರಿಗೆ ಪ್ರಧಾನವಾಗಿದೆ. ಇವರ ಲಿಖಿತ ದಾಖಲೆಗಳಾದ ವಂಶಾವಳಿ ಬರೆಯುವುದು ಕನ್ನಡದಲ್ಲಿಯೇ ಇವರು ಹಾಡುವ ಹಾಡುಗಳು ಕನ್ನಡ ಭಾಷೆಯಲ್ಲಿ ಇವೆ. ಕನ್ನಡದಲ್ಲೆ ಹಾಡುತ್ತಾರೆ. ಕನ್ನಡವೇ ಇವರ ಉಸಿರಾಗಿದೆ. ಚಿಪ್ಪೋಡಿನಲ್ಲಿರುವ ಮಾಹಿತಿಯನ್ನು ರಾಗಬದ್ಧವಾಗಿ ಹಾಡುತ್ತಾ ವಂಶಾವಳಿಯನ್ನು ಹೇಳುತ್ತಾರೆ. ವಂಶವಳಿ ಹೇಳುವ ಗಮಕ ಕಲೆ ಇವರ ಮೌಖಿಕ ಸಾಹಿತ್ಯದ ಅಂಗವೇ ಆಗಿದೆ.

ಈ ಸಮುದಾಯದಲ್ಲಿ ಗ್ರಂಥ ರಚಿಸಿದ, ರಚಿಸುವ ಕವಿಗಳು, ಬರಹಗಾರರು ಇಲ್ಲವಾದರೂ ಒಂದು ಸ್ಮರಣೀಯ ವಿಚಾರ ಅಂಶವನ್ನು ತಿಳಿಸಲು ಸಂತೋಷವಾಗುತ್ತಿದೆ. ಇವರು ಮೌಖಿಕ ಹಾಡು ಹಾಡುವ ಜಾನಪದ ಸಾಹಿತ್ಯ ಲಾವಣಿ ತತ್ವಪದಗಳನ್ನು ಕೇಳಿದರೆ ಆಶ್ಚರ್ಯ ಪಡಬೇಕಾಗುತ್ತದೆ. ಇತ್ತೀಚೆಗೆ ಬೇರೆ ಬೇರೆ ವಿದ್ವಾಂಸರು ಸಂಗ್ರಹಿಸಿ ಪ್ರಕಟಿಸಿದ ಸಂಕಲನಗಳು ಮತ್ತು ಪ್ರಬಂಧಗಳು ಮತ್ತು ಲೇಖನಗಳನ್ನು ಪ್ರಕಟಿಸಿ ಈ ಜನಾಂಗದ ಮೇಲೆ ಬೆಳಕು ಚೆಲ್ಲಿದ್ದಾರೆ. ಶರಣರ ವಚನಗಳು ಸಂಗ್ರಹಿಸಿ ಕನ್ನಡ ಕಣಜ ತುಂಬಿದವರೇ ಈ ಸಮುದಾಯದವರೆಂದು ತಿಳಿದರೆ ಆಶ್ಚರ್ಯವಾಗುತ್ತದಲ್ಲವೇ

ಇವರು ಹಾಡುವ ಎಷ್ಟೋ ಹಾಡುಗಳು ಹಿರಿಯರ ತಲೆಮಾರಿನವರೊಂದಿಗೆ ಅವರ ಹಿಂದೆಯೇ ಹೋದವು. ಅಲ್ಲಲ್ಲಿ ಉಳಿದ ಹಿರಿಯರಿಂದ ಕೆಲವು ಹಾಡುಗಳನ್ನು ಸಂಗ್ರಹ ಮಾಡಿ ಬಹಳ ಪರಿಶ್ರಮದಿಂದ ಜಿಶಂಪ ಅವರು ಮತ್ತು ನಾಗೇಗೌಡರು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಪ್ರತ್ಯೇಕವಾದ ಗಾದೆ ಮಾತುಗಳು ಈ ಸಮುದಾಯದವರಿಗೆ ಯಾವುವು ಇಲ್ಲ. ಆದರೆ ಹಳ್ಳಿಗಳಲ್ಲಿ ಹೆಳವರ ನ್ಯಾಯ ಪರವಾದ ನ್ಯಾಯ, ನ್ಯಾಯಕ್ಕೆ ಕೊನೆಯೇ ಇಲ್ಲವೆಂದು ಆಡಿಕೊಳ್ಳುತ್ತಾರೆ. ಈ ಸಮುದಾಯದವರ ವಿಡಂಬನೆಗೆ ಯಾವ ಒಗಟುಗಳೂ ಇರುವುದಿಲ್ಲ. ಅಲ್ಲದೆ ಒಡಪುಗಳೂ ಸಹ ಕಾಣಬರುವುದಿಲ್ಲ. ಈ ಸಮುದಾಯಕ್ಕೆ ಶಿಷ್ಟ ಸಾಹಿತ್ಯವಂತೂ ಇರುವುದೇ ಇಲ್ಲ.

**ಸಮುದಾಯದ ಸಾಹಿತಿಗಳು :** ಖ್ಯಾತ ಸಾಹಿತಿ, ಬರಹಗಾರರು ಇಲ್ಲ ನಿಜ. ಆದರೂ ಲಶೀರ ವಯಸ್ಸಿನ ಅಂಚಿನಲ್ಲಿರುವ ಸಾಮಾಜಿಕ ಕಾರ್ಯಕರ್ತ ಎಚ್ ಎಸ್

ಫಕ್ಕೀರಪ್ಪ ಚಾವಡಿ ಮಲ್ಲಿಗೆರೆ ಇವರು ಪಾರ್ಟಿಯಿಂದ ಹಾಳಾದ ಹಳ್ಳಿ ಎಂಬ ಎರಡು ನೂರು ಪುಟದ ಪ್ರಥಮ ಕಾದಂಬರಿಯನ್ನು ಪ್ರಕಟಿಸಿದ್ದಾರೆ. ಸುಮಾರು ಐವತ್ತು ವರ್ಷಗಳ ಹಿಂದಿನ ಮಾತು. ಆ ಸಮಯದಲ್ಲಿ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದಾರೆ. ಆದರೆ ಮುಂದೆ ಬರವಣಿಗೆಯನ್ನು ನಿಲ್ಲಿಸಿದರು. ಹಾಗೇ ಮುಂದುವರಿದಿದ್ದರೆ ಕಾದಂಬರಿಕಾರರ ಸಾಲಿನಲ್ಲಿ ಇವರ ಹೆಸರು ಬರುತ್ತಿತ್ತು. ಮತ್ತೊಬ್ಬರು ಶಿಕ್ಷಕ ವೃತ್ತಿಯ ಜೊತೆಗೆ ಸಾಹಿತ್ಯ ರಚನೆ ಮಾಡುವಲ್ಲಿ ಯಶಸ್ವಿಯಾಗಿರುವವರು ಮಲ್ಲಿಕಾರ್ಜುನ ಹುಲಗಣ್ಣನವರ ಅವರು. ಇವರು ಮಕ್ಕಳ ಸಾಹಿತಿಯಾಗಿ ೧೪ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇವರ ಪ್ರಧಾನ ಸಂಪಾದಕತ್ವದಲ್ಲಿ ವಿವಿಧ ಲೇಖಕರ ೧೯ ಪುಸ್ತಕಗಳು ಪ್ರಕಟವಾಗಿವೆ. ಇವರ ಉತ್ತಮ ಸೇವೆ ಗಮನಿಸಿ ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿಗಳನ್ನು ಸರ್ಕಾರ ನೀಡಿ ಗೌರವಿಸಿವೆ. ಶಿಕ್ಷಣ ಸುಧಾರಣೆಗಳು ಪ್ರಬಂಧಕ್ಕೆ ಪ್ರಥಮ ಬಹುಮಾನ ಪ್ರಶಸ್ತಿಯನ್ನು ಎನ್ ಸಿ ಆರ್ ಟಿ ಬೆಂಗಳೂರು ಅವರು ನೀಡಿ ಪುರಸ್ಕರಿಸಿದ್ದಾರೆ. ಹೆಳವ ಸಮುದಾಯಕ್ಕೆ ಸಂದ ಕೀರ್ತಿ ಇದಾಗಿದೆ ಎಂದು ಹೇಳಬಹುದು.

**ಭಾಷೆ**

ಹೆಳವರಲ್ಲಿ ಪೂರ್ವಿಕರ ಭಾಷೆಯನ್ನು ತಮ್ಮ ತಮ್ಮಲ್ಲಿ ಮಾತಾಡುವಾಗ ಬೇರೆಯವರಿಗೆ ತಿಳಿಯಬಾರದೆಂದು 'ಮರುಗತವಕ್' ಎಂಬ ಲಿಪಿಯಿಲ್ಲದ ಭಾಷೆಯನ್ನು ಮಾತನಾಡುತ್ತಿದ್ದರು. ಆ ಭಾಷೆ ಪ್ರಚಲಿತವಾಗಿ ಬಳ್ಳಾರಿ, ಬೀದರ ಜಿಲ್ಲೆಗಳ ಹೊರತಾಗಿ ಕರ್ನಾಟಕದ ಬೇರೆ ಭಾಗಗಳಲ್ಲಿ ಬಳಕೆಯಯಿಲ್ಲ. ಸಾಮಾನ್ಯವಾಗಿ ವಂಶಾವಳಿಯನ್ನು ಬರೆಯುತ್ತಿದ್ದ ಭಾಷೆ, ಹೊಗಳುತ್ತಿದ್ದ ಭಾಷೆ, ಹಾಡುತ್ತಿದ್ದ ಭಾಷೆ ಕನ್ನಡವಾಗಿದ್ದರಿಂದ ಎಲ್ಲರೂ ಅಚ್ಚಕನ್ನಡದಲ್ಲಿ ಮಾತಾಡುತ್ತಾರೆ. ಇದೆ ಇವರ ಮಾತೃಭಾಷೆಯಾಗಿದೆ.

ಕನ್ನಡ ಮಾತೃಭಾಷೆಯಾಗಿರುವುದರಿಂದ ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುವವರು ವ್ಯವಹಾರಿಕವಾಗಿ ತೆಲುಗು, ಮರಾಠಿ, ಉರ್ದು, ತಮಿಳು ಭಾಷೆಗಳನ್ನು ಆಡುವುದು ರೂಢಿಯಾಗಿದೆ. ಇವರಿಗೆ ಪ್ರತ್ಯೇಕವಾದ ಭಾಷೆ ಯಾವುದು ಇಲ್ಲ. ಈ ಸಮುದಾಯ ದವರು ಆಯಾ ಬೇರೆ ಬೇರೆ ಭಾಗಗಳ ಪ್ರದೇಶದಲ್ಲಿ ತಮ್ಮ ವ್ಯವಹಾರಕ್ಕೆ ಸ್ಥಳೀಯ ಭಾಷೆಯನ್ನು ಬಳಸುತ್ತಾರೆ. ಮಹಾರಾಷ್ಟ್ರದ ಗಡಿಭಾಗದಲ್ಲಿರುವವರು ಮರಾಠಿ, ಆಂಧ್ರ ಪ್ರದೇಶದ ಗಡಿ ಭಾಗದಲ್ಲಿರುವವರು ತೆಲುಗು, ತಮಿಳುನಾಡು ಗಡಿಭಾಗದಲ್ಲಿ ತಮಿಳು ಮತ್ತು ಉರ್ದುಭಾಷಿಕರೊಡನೆ ವ್ಯವಹರಿಸುವಾಗ ಉರ್ದು ಭಾಷೆ ಬಳಸುತ್ತಾರೆ. ಅಲ್ಲದೆ ಬೇರೆ ಬೇರೆ ರಾಜ್ಯಗಳಲ್ಲಿರುವವರು ಅಲ್ಲಿಯ ಭಾಷೆಯನ್ನೇ ಮಾತೃಭಾಷೆಯಾಗಿ ಮಾಡಿಕೊಂಡಿದ್ದಾರೆ.

ಕರ್ನಾಟಕದಲ್ಲಿ ಜನಿಸಿದ ಈ ಸಮುದಾಯದವರು ಮಾತೃಭಾಷೆ ಕನ್ನಡವಾದು ದರಿಂದ ಕನ್ನಡ ಬಳಸುತ್ತಾರೆ. ಮಾತಾಡುತ್ತಾರೆ. ಅಕ್ಕಪಕ್ಕದ ನೆರೆ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರ ಪ್ರದೇಶ, ತಮಿಳುನಾಡುಗಳಲ್ಲಿ ವಾಸಿಸುವರು ಅಲ್ಲಿಯ ಭಾಷೆಗಳೇ ಮಾತೃಭಾಷೆಗಳಾಗಿ ಅವನ್ನೇ ಮಾತಾಡಲು ವ್ಯವಹಾರದಲ್ಲಿ ಅಲ್ಲಿಯವರು ಬಳಸುತ್ತಾರೆ.

ಹೆಳವ ಸಮುದಾಯದಲ್ಲಿರುವ ವಿಶಿಷ್ಟ ಪದಗಳ ಅರ್ಥವಿವರಣೆ

೧. **ಚಪೋಡು** : ಸಂಪ್ರಾದಾಯಿಕವಾಗಿ ಬಂದಿರುವ ಒಕ್ಕಲುಮನೆಗಳಿಗೆ ಹೋಗಿ ಅವರ ಮನೆತನದ ಹೆಸರು, ಯಾವ ಊರಿಂದ ಬಂದವರು, ದೇವರು, ಹುಟ್ಟು ಸಾವು ಆದವರ ಮಾಹಿತಿ ಬರೆದಿಡುವ ದಾಖಲೆಯ ಪುಸ್ತಕಕ್ಕೆ ಚಪೋಡುಗಳೆಂದು ಕರೆಯುತ್ತಾರೆ.

೨. **ಗಂಟೆ** : ಕರ್ನಾಟಕದ ದಕ್ಷಿಣ ಭಾಗದಲ್ಲಿರುವ ಹೆಳವ ಸಮುದಾಯದವರು ಒಕ್ಕಲುಮನೆಗಳಿಗೆ ಹೋಗಿ ಹಾಡುತ್ತಾ ವಂಶಾವಳಿ ಹೆಳುವಾಗ ಗಂಟೆ ಬಾರಿಸುತ್ತಾರೆ. ಆ ನಾದವೇ ಹೆಳವರಿಗೆ ಸ್ಫೂರ್ತಿ ನೀಡುತ್ತದೆ. ಇವರಿಗೆ ಗಂಟೆ ಹೆಳವರು ಅನ್ನುತ್ತಾರೆ.

೩. **ಸಬರ** : ಎತ್ತಿನ ಹೆಳವರು ಎತ್ತು ಶೃಂಗರಿಸಿ, ಅದರ ಬೆನ್ನಮೇಲೆ ಸಬರ ಹಾಕುತ್ತಾರೆ. ಸಬರದ ಮೇಲೆ ಹೆಳವ ಕೂತು ಒಕ್ಕಲುಮನೆ ಮುಂದೆ ವಂಶಾವಳಿ ಹೇಳುತ್ತಾನೆ.

೪. **ಉಡುಗೆ ತೊಡುಗೆ** : ಹೆಳವ ಪುರುಷರು ಬಿಳಿ ಶರ್ಟ, ಧೋತರ, ಕರಿಕೋಟು, ತಲೆಗೆ ಕೆಂಪು ರುಮಾಲು, ಹೆಗಲ ಮೇಲೆ ಕೆಂಪು ಶ್ಯಾಲಿನಲ್ಲಿ ಚಪೋಡು ಹಾಕಿಕೊಂಡು ಹೆಗಲ ಮೇಲೆ ಹೊರುತ್ತಾನೆ. ಇವುಗಳಿಂದ ಹೆಳವನೆಂದು ಗುರುತಿಸುತ್ತಾರೆ. ಸ್ತ್ರೀಯರು ಸರಳ ಉಡುಗೆಯಾದ ಸೀರೆ ಕುಪ್ಪಸ ಧರಿಸುತ್ತಾರೆ. ಹೇಳಿಕೊಳ್ಳುವಂತಹ ಬೆಲೆಯುಳ್ಳ ಉಡುಪು ಧರಿಸುವುದಿಲ್ಲ. ಬಿಳಿ, ಕರಿಮಣಿ ತಾಳಿಸರ, ಮೂಗುಬಟ್ಟು, ಕಿವಿಯಲ್ಲಿ ಬೆಂಡವಾಲೆ ಇವು ಅಭರಣಗಳಾಗಿವೆ.

೫. **ಹರಕೆ** : ವಂಶಾವಳಿ ಹೇಳಿದ ನಂತರ ಒಕ್ಕಲುಮನೆಯವರಿಗೆ ಅವರ ವಂಶ, ಅಭಿವೃದ್ಧಿ ಹೊಂದಿಲಿ ಎಂದು ಹಾಡಿನ ಮೂಲಕ ಹರಕೆ ಹಾಕುತ್ತಾರೆ. ಇದರಿಂದ ಒಕ್ಕಲು ಮನೆಯವರು ತೃಪ್ತಿ ಹೊಂದುತ್ತಾರೆ.

೬. **ತಿತ್ತಿ** : ಇದು ಚರ್ಮದ ಚೀಲ. ಇದು ಒಂದು ವಾದ್ಯ, ಬಗಲಲ್ಲಿ ಹಾಕಿಕೊಂಡು ತಮಗೆ ತಿಳಿದಂತೆ ಸ್ವರ ಮತ್ತು ಧ್ವನಿ ಉಪಯೋಗಿಸಿಕೊಂಡು ಭಿಕ್ಷೆಬೇಡುತ್ತಾರೆ. ಇವರನ್ನು ತಿತ್ತಿ ಹೆಳವರೆಂದು ಕರೆಯುತ್ತಾರೆ.

೭. **ಮಂದಾಲೆ** : ಗಿಡಮೂಲಿಕೆ, ತೊಪ್ಪಲು, ಬೇರುಗಳಿಂದ ಔಷಧ ಕೊಡುತ್ತಾರೆ. ಶಹರದ ರಸ್ತೆಯಲ್ಲಿ ಈ ಜನ ಕಾಣುತ್ತಾರೆ. ಇವರಿಗೆ ಮಂದಾಲೆ ಹೆಳವರು ಎಂದು ಕರೆಯುತ್ತಾರೆ.

೮. **ಭಾಷೆ** : ಹೆಳವ ಸಮುದಾಯದವರು ಮಹಾರಾಷ್ಟ್ರ ಗಡಿಭಾಗದಲ್ಲಿರುವವರು, ಮರಾಠಿ ಹಾಗೂ ಕನ್ನಡ ಭಾಷೆ ಮಾತನಾಡುತ್ತಾರೆ. ಉದಾಹರಣೆಗೆ ಬೆಳಗಾವಿ ಜಿಲ್ಲೆ ಗಡಿ ತಾಲ್ಲೂಕುಗಳಲ್ಲಿ ಮರಾಠಿ, ಆಂಧ್ರಪ್ರದೇಶಕ್ಕೆ ಸಮೀಪದ ಗಡಿ ಜಿಲ್ಲೆಗಳಲ್ಲಿ ತೆಲುಗು ಭಾಷೆ ಮಾತಾಡುತ್ತಾರೆ. ಕನ್ನಡ ಭಾಷೆ ಬಂದರೂ ಹೆಚ್ಚು ಬಳಕೆಯಿಲ್ಲ.

ತಮಿಳುನಾಡು ಗಡಿಗೆ ಹೊಂದಿದ ಜಿಲ್ಲೆಗಳಲ್ಲಿ ತಮಿಳು, ತೆಲುಗು, ಕನ್ನಡ ಭಾಷೆಗಳನ್ನು ಬಳಸುತ್ತಾರೆ. ಮಧ್ಯಕರ್ನಾಟಕದಲ್ಲಿ ಹೆಚ್ಚಾಗಿ ಕನ್ನಡ ಭಾಷೆ ಮಾತಾಡುತ್ತಾರೆ.

೯. ಕಂಚಿನ ಪತ್ರ : ಹೆಳವರಿಗೆ ಇದೊಂದು ಪ್ರಮುಖ ದಾಖಲೆ ವಿಜಯನಗರ ಅರಸರು, ವಿಜಾಪುರದ ಆದಿಲಶಾಹಿ ಮನೆತನದವರು, ಮೈಸೂರು ಟಿಪ್ಪುಸುಲ್ತಾನರು ಹೆಳವರಿಗೆ ಕಂಚಿನ ಪತ್ರ ನೀಡಿ ಅವರಿಗೆ ಭಿಕ್ಷುಕ ವೃತ್ತಿಗೆ ಮುದ್ರೆ ಒತ್ತಿರುತ್ತಾರೆ. ಒಕ್ಕಲು ಮನೆಗಳವರಿಗೆ ಇದು ನಂಬಿಗೆಯ ಕುರುಹು ಆಗಿದೆ.

೧೦. ಬಂಡಿ : ಹೆಳವರು ಬಡತನದಲ್ಲಿ ಇರುವುದರಿಂದ ಇಂದಿಗೂ ಒಂಟಿಎತ್ತಿನ ಬಂಡಿಯಲ್ಲಿ ತಮ್ಮ ಕುಟುಂಬದ ಸದಸ್ಯರೊಂದಿಗೆ ಅಲೆಮಾರಿಗಳಾಗಿ ಸಂಚಾರ ಮಾಡುವುದಕ್ಕೆ ಬಂಡಿ (ಚಕ್ಕಡಿ)ಯನ್ನು ಉಪಯೋಗಿಸುತ್ತಾರೆ.

೧೧. ಉಡಿಕೆ : ಹೆಳವ ಸಮುದಾಯದಲ್ಲಿ ವಿದವೆಯಾದ ಮಹಿಳೆಯರಿಗೆ ಮರುವಿವಾಹ ಮಾಡುವುದಕ್ಕೆ ಉಡಿಕೆ ಮದುವೆ ಎನ್ನುತ್ತಾರೆ.

೧೨. ದೂದಿ : ಹಳ್ಳ, ಕೆರೆ, ಅಂಚಿನಲ್ಲಿ ಬೆಳೆಯುವ ಗಲಗು ಗಿಡದಂತೆ ಹುಲ್ಲುಗಿಡದಲ್ಲಿ ಅರಳಿದ ಹೂವು ಅರಳಿ ರೂಪದಲ್ಲಿರುತ್ತದೆ. ಅದನ್ನು ಚಿಕ್ಕ ಚಿಕ್ಕ ಉಂಡಿ ಮಾಡಿ ಚಿಲುಮೆಯಲ್ಲಿ ಗಾಂಜಾ ಸೇದುವವರಿಗೆ ಮಾರುತ್ತಾರೆ. ಇದಕ್ಕೆ ದೂದಿ ಎಂದು ಕರೆಯುವದಲ್ಲದೆ ಇದನ್ನು ಮಾರುವವರು ದೂದಿ ಹೆಳವರು.

೧೩. ಪಿಚ್ಚಕುಂಟಲ : ಹೆಳವರನ್ನು ತೆಲುಗಿನಲ್ಲಿ ಪಿಚ್ಚಗುಂಟಲ ಎಂದು ಕರೆಯುತ್ತಿದ್ದು ಪಿಚ್ಚ ಎಂದರೆ ಭಿಕ್ಷೆ ಮತ್ತು ಗುಂಟ ಎಂದರೆ ಕುಂಟ ಎಂದರ್ಥ. ಭಿಕ್ಷಾಟನೆ ಮಾಡುವವನೆ ಪಿಚ್ಚಗುಂಟಲ ಈತನನ್ನು ಹೆಳವನೆಂದು ಕರೆಯುತ್ತಾರೆ.

೬

# ಪ್ರದರ್ಶಕ ಕಲೆಗಳು

ಹೆಳವರು ಪೌರಾಣಿಕ ನಾಟಕಗಳನ್ನು ಕಲಿತು ಆಡುತ್ತಾರೆ ಹಾಗೂ ಸಂತೋಷ ಪಡಿಸುತ್ತಾರೆ. ಕೆಲವು ಹಳ್ಳಿಗಳಲ್ಲಂತೂ ಈ ಸಮುದಾಯದವರಿಗೆ ನಾಟಕಗಳು ಹುಚ್ಚು. ಈ ದೃಷ್ಟಿಯಲ್ಲಿ ಉದಾಹರಿಸಬೇಕೆಂದರೆ ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕು ಸೋಮಸಾಗರ ಗ್ರಾಮದಲ್ಲಿ ಹೆಳವ ಸಮುದಾಯದ ದೊಡ್ಡಗುಡ್ಡಪ್ಪ ಫಕ್ಕೀರಪ್ಪ ಮಾಸನಕಟ್ಟಿ ಎಂಬುವವರು ಒಳ್ಳೆಯ ಸಂಗೀತ ನಾಟಕ ಮಾಸ್ತರರಾಗಿ ಗ್ರಾಮದಲ್ಲಿ ಪ್ರತಿವರ್ಷ ಒಂದು ನಾಟಕ ಎಲ್ಲ ಸಮುದಾಯದವರನ್ನು ಕೂಡಿಸಿ ಅವರಿಗೆ ಕಲಿಸಿ ಆಡಿಸುತ್ತಾರೆ. ಸುಮಾರು ೩೦ ವರ್ಷಗಳಿಂದಲೂ ಈ ನಾಟಕೀಯ ಸೇವೆ ಮಾಡುತ್ತಿದ್ದು ಪರಸ್ಥಳ ದಲ್ಲಿಯೂ ನಾಟಕ ಕಲಿಸಿ ಆಡಿಸಿದ ಅನೇಕ ಉದಾಹರಣೆಗಳು ಇವೆ. ಸುಮಾರು ಅರವತ್ತಾರರ ಸಮೀಪ ವಯಸ್ಸಾಗಿರುವ ಇವರು ಇನ್ನೂ ನಾಟಕ ಕಲಿಸುವುದೆಂದರೆ ಹುಚ್ಚು. ಪ್ರತಿವರ್ಷ ನಾಟಕ ಕಲಿಸುತ್ತಾರೆ. ನಾಟಕ ಮಾಸ್ತರ ಎಂದೇ ಪ್ರಸಿದ್ಧಿಯಾಗಿದ್ದಾರೆ. ಈ ಸಮುದಾಯದಲ್ಲಿ ಅನುಕೂಲತೆಗಳು ಒದಗಿ ಬಂದರೆ ಯಾವುದರಲ್ಲೂ ಕಡಿಮೆ ಆಗದಂತಹ ಕಲೆಯನ್ನು ತೋರಿಸಬಲ್ಲರು. ಇವರ ಒಳ್ಳೆಯ ಕಲೆ ನಾಟಕ ಗುರುತಿಸಿ ಸರ್ಕಾರ ಅವರಿಗೆ ಜೀವನ ಪರ್ಯಂತ ನಾಟಕ ವೃತ್ತಿ ವೇತನ ಮಂಜೂರು ಮಾಡಲು ಆದೇಶಿಸಿದೆ.

ಒಕ್ಕಲು ಮನೆಗಳಿಗೆ ಹೋಗುವಾಗ ಕನ್ನಡದಲ್ಲಿ ಸ್ಪಷ್ಟವಾಗಿ ಉಚ್ಚರಿಸಿ ಒಕ್ಕಲು ಮನೆಯವರನ್ನು ಹಾಡಿ ಹೊಗಳಿ ತಮ್ಮದೇ ಆದ ಭಿಕ್ಷಾ ನೈಪುಣ್ಯತೆಯನ್ನು ಬೀರುತ್ತಾರೆ. ಹೀಗಾಗಿ ನಾಟಕಗಳ ಸಂಭಾಷಣೆಗಳನ್ನು ಎಲ್ಲರಿಗಿಂತ ಮೊದಲು ವೇಗವಾಗಿ ಕಲಿಯು ತ್ತಾರೆ. ಈ ಮೊದಲು ಹೆಣ್ಣು ಪಾತ್ರವನ್ನು ನಯ ನಾಜೂಕದಿಂದ ಗಂಡುಮಕ್ಕಳೇ ಮಾಡುತ್ತಿದ್ದರು.

ಹಾಡುಗಾರಿಕೆಯಲ್ಲಿ ಕನ್ನಡ ಜಾನಪದದ ಉಳಿಸುವಿಕೆ ಮತ್ತು ಬೆಳೆಸುವಿಕೆಯಲ್ಲಿ ಈ ಸಮುದಾಯದವರ ಪಾತ್ರ ದೊಡ್ಡದಿದೆ. ಆದರೆ ಪ್ರತ್ಯೇಕವಾಗಿ ಮನೋರಂಜನೆ ಮಾಡುವ ವ್ಯವಸ್ಥೆಯಿಲ್ಲ. ಬಹುಸಂಖ್ಯಾತ ಕುಟುಂಬಗಳು ವಾಸವಾಗಿರುವಲ್ಲಿ ನಾಟಕ ಅಭಿನಯಿಸಿ ಪಾತ್ರ ಮಾಡುವ ಕಲೆ ಹೊಂದಿರುತ್ತಾರೆ. ವರ್ಷದಲ್ಲಿ ಗ್ರಾಮಗಳಲ್ಲಿಯ

ಜಾತ್ರೆ ಸಂದರ್ಭಗಳಲ್ಲಿ ಬೇರೆ ಸಮುದಾಯದವರೊಡನೆ ಕೂಡಿಕೊಂಡೇ ನಾಟಕದಲ್ಲಿ ತೊಡಗುತ್ತಾರೆ. ಏಕೆಂದರೆ ನಾಟಕದ ಖರ್ಚುವೆಚ್ಚ ಬರುವುದರಿಂದ ಮುಂದುವರಿದ ಸಮಾಜದವರಿಗೆ ಹೆಚ್ಚಿನ ಭಾರ ಹಾಕಿ ಈ ಕಾರ್ಯದಲ್ಲಿ ತೊಡಗುತ್ತಾರೆ. ಇಷ್ಟು ಹೊರತಾಗಿ ಪ್ರತ್ಯೇಕ ಮನೋರಂಜನೆ ಗೋಜಿಗೆ ಹೋಗುವುದಿಲ್ಲ. ಆ ದಿಶೆಯಲ್ಲಿ ಅದು ಸಾಧ್ಯವೂ ಆಗಿಲ್ಲ.

ತಮ್ಮ ವೃತ್ತಿಯಿಂದ ಜೀವನ ನಡೆಸಬೇಕಾಗಿರುವುದರಿಂದ ವರ್ಷದಲ್ಲಿ ೬ ತಿಂಗಳು ಒಕ್ಕಲು ಮನೆಗಳಿಗೆ ಹೋಗಿ ಜುಲೈ ತಿಂಗಳಲ್ಲಿ ಒಂದು ಕಡೆ ಬೈಲುಜಾಗದಲ್ಲಿ ಕ್ಯಾಂಪ್ ಹಾಕುತ್ತಾರೆ. ಯಾವ ಜಿಲ್ಲೆಯವರೇ ಇರಲಿ ಅವರಿಗೆ ಎಲ್ಲರೂ ಒಂದು ಕಡೆ ಕೂಡುವ ದಿನ ಗೊತ್ತಿರುತ್ತದೆ. ಅಲ್ಲಿ ಕನಿಷ್ಠ ಮೂರು ತಿಂಗಳ ಕಾಲ ಕಲೆಯುತ್ತಾರೆ. ಅದೇ ಅವರಿಗೆ ವಿರಾಮದ ದಿನಗಳು. ಮನೋರಂಜನೆಗೆ ಅವಕಾಶವಿಲ್ಲ. ಈ ವರ್ಷ ಹುಬ್ಬಳ್ಳಿ ನವನಗರದಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ಚಕ್ಕಡಿ ಬಂಡಿಗಳು ಗುಡಾರ ಡೇರೆ ಹಾಕಿರುವರು. ಇವರೊಂದಿಗೆ ಸಮುದಾಯದವರು ಮತ್ತು ತಜ್ಞರು ಇವರ ಸ್ಥಿತಿಗತಿಗಳ ಕುರಿತು ಸಂವಾದ ನಡೆಸಿದರು.

**ಭಿನ್ನ ಒಳ ಸಮುದಾಯಗಳ ಜೊತೆಗಿನ ಸಂಬಂಧ :** ಹೆಳವ ಸಮುದಾಯದವರು ಮೂಲತಃ ವೃತ್ತಿಯಲ್ಲಿ ತಮ್ಮ ತಮ್ಮ ಒಕ್ಕಲು ಮನೆಗಳಿಗೆ ಹೋಗಿ ಹಿಂದಿನ ಅವರ ವಂಶಾವಳಿಗಳನ್ನು ಹೊಗಳಿ ಮತ್ತು ಆ ಸಮಯದಲ್ಲಿರುವ ಹೆಚ್ಚುವರಿ ಕುಟುಂಬದ ಸದಸ್ಯರ ಬಗ್ಗೆ ಬರೆದುಕೊಂಡು ಒಕ್ಕಲು ಕುಟುಂಬಗಳ ಪ್ರೀತಿ ವಿಶ್ವಾಸವನ್ನು ಗಳಿಸಿಕೊಂಡು ಅವರಿಂದ ಕಾಳು ಮತ್ತು ಹಣದ ರೂಪದಲ್ಲಿ ಮತ್ತು ಬಟ್ಟೆಗಳನ್ನು ಸಹ ಕೊಡುಗೆಯಾಗಿ ಪಡೆಯುತ್ತಿದ್ದರಿಂದ ಅವರು ಇತರ ಸಮುದಾಯಗಳೊಡನೆ ಬಹಳಷ್ಟು ಸ್ನೇಹಮಯಿಗಳಾಗಿ ವರ್ತಿಸಲೇಬೇಕಾಗಿತ್ತು. ಅದೊಂದು ಅವರ ಸಂಸ್ಕೃತಿ ಸಂಪ್ರಾದಯ ಪರಂಪರೆಯಾಗಿ ಬೆಳೆದು ಈಗಲೂ ಸಹ ಬೇರೆ ಸಮುದಾಯದಿಂದ ಪ್ರೀತಿಗೆ ಪಾತ್ರರಾಗಿದ್ದಾರೆ. ಇವರು ಕೇವಲ ಅಕ್ಷರಜ್ಞಾನದಿಂದ ವಂಶಾವಳಿಯನ್ನು ಬರೆದು ಎಲ್ಲಾ ಧರ್ಮದವರೊಡನೆ ಹೊಂದಿಕೊಂಡು ಹೋಗುವ ಸ್ವಭಾವವುಳ್ಳವರಾಗಿದ್ದರು. ಅವರ ಆಚರಣೆ ಸಾಮಾನ್ಯವಾಗಿ ಸಮಾಜ ಮೆಚ್ಚುವಂತಿದೆ. ಇವರಲ್ಲಿ ಒಳಪಂಗಡಗಳೆಂದು ಬೇರ್ಪಡಿಸುವಷ್ಟು ಒಳಪಂಗಡ ಗಳು ಇರುವುದಿಲ್ಲ. ಆದರೆ ಬೇರೆ ಬೆರೆ ವೃತ್ತಿಗನುಸರಿಸಿ ಒಳಪಂಗಡಗಳೆಂದು ಕರೆಯಲ್ಪುಡು ತ್ತವೆ. ಎತ್ತಿನ ಮೇಲೆ ಕುಳಿತು ಹೋಗುವವರು ಎತ್ತಿನ ಹೆಳವರು, ಗಂಟೆ ಹಿಡಿದು ಕೊಂಡು ಹೋಗುವವರು ಗಂಟೆ ಹೆಳವರು, ದೂದಿಮಾಡಿ ಮಾರುವವರು ದೂದಿ ಹೆಳವರು, ಕಿವಿಯಲ್ಲಿ ಕೂಕಣಿ ತೆಗೆಯುವವರು ಕೂಕಣಿ ಹೆಳವರು, ಚಾಪೆ ಹೆಣೆಯುವರು ಚಾಪೆ ಹೆಳವರು, ಬೇರುಗಳು ಮತ್ತು ಗಿಡದ ತುಕಡಿಗಳ ಸೊಪ್ಪುಗಳಿಂದ ಔಷಧಿ ಮಾಡಿ ಮಾರಾಟ ಮಾಡುವವರು ಮಂದಾಲೆ ಹೆಳವರು, ಹಾವು ಹಿಡಿದು ಜೀವನ ಮಾಡುವವರು ಹಾವು ಹೆಳವರು, ಅಡವಿಯಲ್ಲಿ ವಾಸ ಮಾಡುವವರು ಅಡವಿ ಹೆಳವರು. ಇವರು ಸುರುಪುರ ತಾಲ್ಲೂಕ ಕಕ್ಕೇರಿಯಲ್ಲಿ ಅಡವಿಯಲ್ಲಿ ವಾಸ ಮಾಡಿದ್ದಾರೆ.

ವೃತ್ತಿ ತಾರತಮ್ಯದಿಂದ ಹೆಳವರಲ್ಲಿ ಕೆಲವು ಪಂಗಡದವರು ತಾವು ಉಳಿದ ಪಂಗಡಗಳಿಗಿಂತ ಶ್ರೇಷ್ಠರೆಂದು ಹೇಳಿಕೊಳ್ಳುತ್ತಿದ್ದರು. ಜಾಗತೀಕರಣದ ಯುಗದಲ್ಲಿ ಅಂತಹ ಮಹತ್ವವೇನೂ ಇಲ್ಲ. ಪಿಚ್ಚುಗುಂಟಲು ಸಮುದಾಯದವರು ಉಳಿದ ಪಂಗಡಗಳಿಗಿಂತ ಕಸುಬು ಇಲ್ಲದೆ ಭಿಕ್ಷಾಟನೆಯೇ ಇವರಿಗೆ ಮೂಲವೃತ್ತಿಯಾಗಿದೆ. ಇವರ ವಿಶೇಷತೆ ಏನೆಂದರೆ ದೇವದಾಸಿ ವೃತ್ತಿಯನ್ನೊಳಗೊಂಡ ಈ ಸಮುದಾಯದಲ್ಲಿಯ ಹೆಣ್ಣಿಗೆ ಪ್ರಮುಖ ಸ್ಥಾನವಿತ್ತು. ಹೆಣ್ಣನ್ನು ಕೀಳಾಗಿ ಕಾಣುವುದಿಲ್ಲ. ಅದೇ ಕಾರಣದಿಂದ ಈಗಲೂ ನೆಪಮಾತ್ರಕ್ಕೆ ವಧುವಿಗೆ ತೆರ (ವಧುದಕ್ಷಿಣೆ) ಕೊಡುವ ಪದ್ಧತಿ ಪ್ರಸ್ತುತವಾಗಿ ಮುಂದುವರೆದಿದೆ. ಮುಂದುವರಿದ ಪ್ರಗತಿಪರರು ಮಾತ್ರ ಹೆಣ್ಣಿನ ಮನೆಯವರಿಂದ ವರದಕ್ಷಿಣೆ ತುಸು ವಾದರೂ ಪಡೆಯಲು ಮುಂದಾಗುತ್ತಿದ್ದಾರೆ.

ಮೂಲತಃ ಈ ಸಮುದಾಯದವರು ಅಸ್ಪೃಶ್ಯರಲ್ಲ. ಮೇಲ್ಜಾತಿಗಳ ಕುಟುಂಬಗಳ ಸಹಿತ ಒಕ್ಕಲುಮನೆಗಳು ಆಗಿದ್ದರಿಂದ ಈ ಸಮುದಾಯದವರನ್ನು ಅಸ್ಪೃಶ್ಯರಂತೆ ಕೀಳಾಗಿ ಕಾಣದಿದ್ದರೂ ಈ ಸಮುದಾಯವನ್ನು ಕೀಳು ಜಾತಿಯೆಂದು ಪರಿಗಮಿಸಲಾಗಿದೆ. ಬಹುಶಃ ಇದಕ್ಕೆ ಅವರ ಭಿಕ್ಷಾಟನೆ ವೃತ್ತಿ ಮತ್ತು ಸಾಮಾಜಿಕ ಹಿಂದುಳಿದಿರುವಿಕೆ ಕಾರಣವಾಗಿರಬಹುದು. ವ್ಯವಸಾಯ ಕುಟುಂಬಗಳಿಗೆ ಬಡಿಗ, ಕ್ಷೌರಿಕ, ಮಡಿವಾಳ, ಹೊಲೆಯ, ಕಂಬಾರ, ಕುಂಬಾರ, ಮುಂತಾದ ಆಯಗಾರರ ಸಮುದಾಯದಂತೆ ಈ ಸಮುದಾಯವು ಸಹ ಒಂದು ಆಯಗಾರ ಸಮುದಾಯವೆಂದು ಪರಿಗಣಿಸಿದೆ. ಈ ಸಮುದಾಯದವರಿಗೆ ಅವರ ಒಕ್ಕಲು ಕುಟುಂಬಗಳು ಪ್ರತಿವರ್ಷ ಸುಗ್ಗಿ ಸಮಯಕ್ಕೆ ದವಸಧಾನ್ಯಗಳನ್ನು ನೀಡುತ್ತಾರೆ. ಸಮಾರಂಭಗಳಲ್ಲಿ ಬಟ್ಟೆ ಬರೆ ಕಾಣಿಕೆ ಕೊಡುತ್ತಾರೆ.

ಉನ್ನತ ಜಾತಿಯ ದೇವಾಲಯಗಳಲ್ಲಿ ಆದರಲ್ಲೂ ಬ್ರಾಹ್ಮಣ, ಲಿಂಗವಂತ ದೇವಾಲಯಗಳಲ್ಲಿ ಉಳಿದ ಸವರ್ಣೀಯರಂತೆ ಈ ಜನರಿಗೂ ಪ್ರವೇಶವಿದೆ. ಆದರೆ ಊಟ ಇತ್ಯಾದಿಗಳಲ್ಲಿ ಈಗಲೂ ಕೆಲವು ಮಠಗಳಲ್ಲಿ ಸ್ವಲ್ಪ ಮಟ್ಟಿಗೆ ಮಡಿವಂತಿಕೆಯನ್ನು ಆಚರಿಸಲಾಗುತ್ತಿದೆ. ಸಾರ್ವಜನಿಕ ಬಾವಿ, ಹೊಂಡಗಳಲ್ಲಿ ಈ ಸಮುದಾಯದವರಿಗೆ ಯಾವುದೇ ನಿರ್ಬಂಧವಿಲ್ಲ. ಆದರೂ ಹಿಂದಿನ ಕಾಲದ ಕೆಲವರು ಮಡಿವಂತಿಕೆ ಮಾಡಿಕೊಳ್ಳುತ್ತಿದ್ದಾರೆ. ಅಂತಹ ಮಡಿವಂತರಿಂದ ಈ ಸಮುದಾಯದವರಿಗೆ ತೊಂದರೆ ಯಿಲ್ಲ.

**ಧರ್ಮ ನಿರಪೇಕ್ಷ ಸಂಬಂಧ :** ಈ ಶ್ರೇಣೀಕೃತ ಜಾತಿಗಳ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ಯಾವ ವರ್ಗಕ್ಕೂ ಸೇರಿದವರೆಂದು ಕಂಡುಬರುವುದಿಲ್ಲ. ಆದರೆ ಇವರ ಆಚಾರ ವಿಚಾರಗಳು, ರೀತಿ ನೀತಿಗಳು, ಪೂಜೆ ಪುನಸ್ಕಾರಗಳು ಮುಂತಾದ ವುಗಳಿಂದ ಇವರು ಅಪ್ಪಟ ಹಿಂದುಗಳಾಗಿದ್ದಾರೆ. ಹಿಂದೂ ಧರ್ಮದ ಹಿಂದುಳಿದ ವರ್ಗಗಳ ಸೂಕ್ಷ್ಮದರ್ಶಕದಲ್ಲಿ ಎಣಿಸುವಷ್ಟು ಜನಸಂಖ್ಯೆ ಇರುವ ತೀರಾ ನಿಕೃಷ್ಟ ಜಾತಿಯ ಈ ಸಮುದಾಯದವರು ಬಹುಶಃ ಈ ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿಯ, ಪರಿಶಿಷ್ಟ ಪಂಗಡಗಳಲ್ಲಿರುವ ಯಾವ ಜಾತಿಗೂ ಹೋಲಿಸಿದರೂ ಈ

ಸಮುದಾಯದ ಸ್ಥಾನ ಕಟ್ಟಕಡೆಯದಾಗಿದೆ. ಅಲ್ಪಸಂಖ್ಯಾತ ಹಿಂದೂಗಳಲ್ಲಿ ಅಲ್ಪ ಸಂಖ್ಯಾತರು ಧಾರ್ಮಿಕವಾಗಿ ಸಂವಿಧಾನದಡಿಯಲ್ಲಿ ಅಲ್ಪಸಂಖ್ಯಾತರೆನಿಸಿಕೊಂಡಿರುವ ಮುಸ್ಲಿಂ, ಕ್ರಿಶ್ಚಿಯನ್, ಜೈನರು, ಸಿಕ್ಕರುಗಳಿಗೆ ಹೋಲಿಸಿದರೆ ಆಕಾಶದಲ್ಲಿಯ ಚುಕ್ಕೆಯಷ್ಟು ದುರಾದೃಷ್ಟವೆಂದರೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳವರಿಗೆ ರಕ್ಷಣೆಗಾಗಿ ಇರುವ ದೌರ್ಜನ್ಯ, ತಡೆ ಕಾನೂನು ಈ ಸಮುದಾಯಗಳಿಗೂ ಅನ್ವಯಿಸುವಂತೆ ರಾಜ್ಯ ಮತ್ತು ಕೇಂದ್ರಸರ್ಕಾರಗಳು ಯಾವುದೇ ಕ್ರಮಕೈಗೊಂಡಿರುವುದಿಲ್ಲ. ಬಹುಶಃ ಈ ಸಮುದಾಯದವರು ಈ ಪ್ರಜಾಪ್ರಭುತ್ವದಲ್ಲಿ ಹೆಚ್ಚು ಮತಗಳನ್ನು ಹೊಂದಿರದೆ ಮತ್ತು ಅಲೆಮಾರಿಗಳಾಗಿದ್ದು ಮತಪಟ್ಟಿಗೂ ಸೇರದವರಾಗಿಲ್ಲದ ಕಾರಣವಾಗಿರಬಹುದು ಮತ್ತು ಮತಗಳ ಸಂಖ್ಯೆ ನೋಡದೆ ಮಾನವೀಯತೆಯಿಂದ ನೋಡಿದರೆ ದೌರ್ಜನ್ಯ ತಡೆ ಕಾನೂನನ್ನು ಈ ಸಮುದಾಯ ಮತ್ತು ಇತರೆ ಅಲೆಮಾರಿ ಸಮುದಾಯಗಳಿಗೆ ಅನ್ವಯಿಸುವಂತೆ ಪರಿಶಿಷ್ಟರ ದೌರ್ಜನ್ಯ ತಡೆ ಕಾನೂನಿಗೆ ತಿದ್ದುಪಡಿ ಮಾಡುವುದು ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಚಿಂತನೆಯಾಗಬೇಕಾಗಿದೆ. ಈ ಸಮುದಾಯದವರು ಸಮಾಜದ ಬೇರೆ ಸಮುದಾಯದವರ ಶೈಕ್ಷಣಿಕ, ಆರ್ಥಿಕವಾಗಿ ಹೋಲಿಕೆಗೆ ಯಾವ ಅರ್ಹತೆ ಇರದಿದ್ದರೂ ಸಮಾಜದ ಉಳಿದ ಸಮುದಾಯದವರೊಡನೆ ಹೇಗೆ ಪ್ರೀತಿ, ಸಹಾನುಭೂತಿ ಮತ್ತು ಅನುಕಂಪ ಸಾಧಿಸಬೇಕೆಂಬ ಬಗ್ಗೆ ಮಾದರಿಯಾಗಿದ್ದಾರೆ.

**ಆರ್ಥಿಕ, ರಾಜಕೀಯ ಮತ್ತು ಸಮಾಜಿಕ ಸ್ಥಾನಮಾನ :** ಸಮುದಾಯದ ಪ್ರಬಲತೆ ಹಿಂದುಳಿದ ವರ್ಗಗಳಲ್ಲಿ ಅಲ್ಪ ಸಂಖ್ಯಾತರಲ್ಲಿ, ಅಲ್ಪ ಸಂಖ್ಯಾತರಾದ ಕಾರಣ ಮತ್ತು ಪರಿಶಿಷ್ಟ ಪಂಗಡಗಳಿಗೆ ಇದ್ದಂತೆ ಮೀಸಲಾತಿಯಿಲ್ಲದ ಕಾರಣ ಬಹುಸಂಖ್ಯಾರಾಗಿರುವ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿಯೇ ಸೇರಿರುವುದರಿಂದ ರಾಜಕೀಯ ಪ್ರಾಬಲ್ಯತೆಯ ಬಗ್ಗೆ ಮಾತನಾಡಲು ಅಪ್ರಸ್ತುತ. ಬಹುಶಃ ಈ ರಾಜ್ಯದಲ್ಲಿ ಪಂಚಾಯತ್ ಸದಸ್ಯ ಸ್ಥಾನಕ್ಕೂ ಸಹ ಚುನಾವಣೆ ಎದುರಿಸುವ ಸಾಮರ್ಥ್ಯ ಇಲ್ಲ. ಆದ್ದರಿಂದ ಈ ಸಮುದಾಯ ದವರ ರಾಜಕೀಯ ಪ್ರಾಬಲ್ಯ ಶೂನ್ಯಕ್ಕಿಂತಲೂ ಕಡಿಮೆಯೆಂದೇ ಹೇಳಬಹುದಾಗಿದೆ. ಏಕೆಂದರೆ ಬರಿ ಶೂನ್ಯಕ್ಕೂ ಒಂದು ಸ್ಥಾನವಿದೆ. ಆರ್ಥಿಕವಾಗಿ ಈ ಸಮುದಾಯದವರು ಸರ್ಕಾರದ ಬಡತನದ ರೇಖೆಗಿಂತ ಕೆಳಗಿನವರೇ ಆಗಿದ್ದು ಸ್ವಂತ ಜಮೀನು ಹೊಂದಿ ದವರು ವಿರಳ ಮತ್ತು ಅಪರೂಪ. ಸ್ವಂತ ಮನೆ ಇದ್ದವರು ಕಡಿಮೆ. ಗುಡಿಸಲುಗಳು, ಗುಡಾರ ಡೇರೆಗಳು ಒಂಟಿ ಎತ್ತಿನ ಚಕ್ಕಡಿ ಬಂಡಿ ಇವರ ಆಸ್ತಿ ಅಡುವುಗಳು. ಸರ್ಕಾರದ ನೌಕರಿಯಲ್ಲೂ ಬೆರಳೆಣಿಕೆಯಷ್ಟಿರಬಹುದು, ಅದು ಕೂಡ ಸಣ್ಣಪುಟ್ಟ ಕೆಲಸಗಳಲ್ಲಿ. ಇವರು ಅಷ್ಟೊಂದು ಕಂದಾಚಾರಿಗಳಲ್ಲ. ರಕ್ತ ಸಂಬಂಧ ಬೆಳೆಸುವಾಗ ಸ್ವಲ್ಪ ಮಟ್ಟಿಗೆ ಬೆಡಗುಗಳನ್ನು ಮತ್ತು ವೃತ್ತಿಗಳನ್ನು ಪರಿಗಣಿಸುವುದುಂಟು. ಈ ಸಮುದಾಯವನ್ನು ಅನ್ಯ ಸಮುದಾಯಗಳಿಗೆ ಹೋಲಿಸಿದಾಗ ಹೋಲಿಕೆ ಮಾಡುವ ಯಾವ ಸ್ಥಾನಮಾನಗಳು ಈ ಸಮುದಾಯದಲ್ಲಿ ಕಂಡುಬರುವುದಿಲ್ಲ.

**ಸಂಸ್ಕೃತೀಕರಣ, ಅನ್ಯ ಬುಡಕಟ್ಟು ಧರ್ಮಗಳ ಪ್ರಭಾವ :** ಯಾವುದೇ ಸಮಾಜದ

ಸಂಸ್ಕೃತಿ ನಿಂತ ನೀರಲ್ಲ, ಹರಿಯುವ ನದಿ. ಆಯಾಕಾಲಕ್ಕೆ ತಕ್ಕಂತೆ ಪರಿಸ್ಥಿತಿ ಗನುಗುಣ ವಾಗಿ ಬದಲಾಗುತ್ತಿದೆ. ಜೊತೆಗೆ ಬದಲಾಗಲೇಬೇಕಾಗುತ್ತದೆ. ಈ ಸಮುದಾಯದಲ್ಲಿ ಸಹಿತ ಬೇರೆ ಸಮುದಾಯದವರನ್ನು ನೋಡಿ ತಮ್ಮ ಮೂಲ ಸಂಸ್ಕೃತಿಯಿಂದ ಬದಲಾವಣೆಯ ಹಾದಿಯಲ್ಲಿ ನಡೆಯುತ್ತಿದ್ದಾರೆ. ಸಂಸ್ಕೃತಿ ಬದಲಾಗಿದ್ದರೂ ಮೂಲ ಸಂಸ್ಕಾರ, ಸಂಪ್ರದಾಯ, ಪರಂಪರೆಗಳು ಹಾಗೆಯೆ ಮುಂದುವರೆದಿದೆ. ಆಯಾ ಪ್ರದೇಶಕ್ಕೆ ತಕ್ಕಂತೆ ಅನ್ಯ ಬುಡಕಟ್ಟುಗಳು ಧರ್ಮಗಳು, ಸಮಾಜದ ರೀತಿ ನೀತಿಗಳು ಉಳಿದ ಸಮಾಜದ ಮೇಲೆ ಪ್ರಭಾವ ಬೀರುವುದು ಸ್ವಾಭಾವಿಕ. ಈ ಸಮುದಾಯದಲ್ಲಿ ಸಹ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಲಿಂಗಾಯತರ ಪ್ರಭಾವ ಹೆಚ್ಚಾಗಿದ್ದು ಮೂಲತಃ ಶಿವಭಕ್ತರಾದ್ದರಿಂದ ಶಿವನ ವೇಷ ಭೂಷಣಗಳಲ್ಲಿ ಆಚಾರಗಳನ್ನು ಆಚರಿಸುವ ಮಾರ್ಗವನ್ನು ಅನುಸರಿಸುತ್ತಿದ್ದಾರೆ. ಅಲ್ಲದೆ ಶ್ರೀಶೈಲಮಠದ ಒಕ್ಕಲುಗಳಾಗಿರುತ್ತಾರೆ. ಶ್ರೀ ಯಲ್ಲಮ್ಮ ದೇವಿಯ ಪ್ರಭಾವ ಕೆಲವು ಕುಟುಂಬದವರಿಗೆ ಇದೆ. ಆದರೆ ಹಳೆಮೈಸೂರು ಸಂಸ್ಥಾನದ ಜಿಲ್ಲೆಗಳಾದ ಚಾಮರಾಜನಗರ, ಮೈಸೂರು, ಮಂಡ್ಯ, ಹಾಸನ ಮತ್ತು ತುಮಕೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಗಂಗಡಿಕಾರ ಒಕ್ಕಲಿಗ, ಹಳ್ಳಿಕಾರ ಒಕ್ಕಲಿಗ, ದಾಸ ಒಕ್ಕಲಿಗ ಪ್ರಭಾವ ಇರುವುದರಿಂದ ಈ ಭಾಗದ ಹೆಳವ ಸಮುದಾಯದವರು ಮೂಲತಃ ತಾವು ಒಕ್ಕಲಿಗ ಸಮುದಾಯದವರಾಗಿದ್ದು ಒಕ್ಕಲಿಗರೆಂದು ಹೇಳಿಕೊಳ್ಳುತ್ತಿದ್ದಾರೆ. ಸಲ್ಪಮಟ್ಟಿಗೆ ಆ ಸಮುದಾಯದಲ್ಲಿ ಬೇರ್ಪಡಿಸದಷ್ಟು ವಿಲೀನರಾಗಿ ಹೋಗಿದ್ದಾರೆ. ಇವರಿಗೆ ಆದಿಚುಂಚನಗಿರಿ ಸಂಸ್ಥಾನವೇ ಇವರ ಮಠವಾಗಿದೆ. ಕುರುಬ ಸಮುದಾಯ ದವರು ಹೆಚ್ಚಾಗಿರುವ ಪ್ರದೇಶಗಳಲ್ಲಿ ಕುರುಬ ಸಮುದಾಯದವರೆಂದು ಹೇಳಿಕೊಂಡು ಕುರುಬ ಸಮುದಾಯದ ಗುರುಗಳಾದ ಸಾವಂತ ಕುಲದ ಒಡೆಯರು ಇವರ ಗುರು ಗಳಾಗಿದ್ದಾರೆ. ಈಗಲೂ ಬೆಳಗಾವಿ ಜಿಲ್ಲೆಯಲ್ಲಿರುವ ಒಡೆಯರ ಮಠದ ಮಠಾಧಿಪತಿಗಳು ಈ ಸಮುದಾಯದ ಮಠಾಧಿಪತಿ ಎಂದೇ ಗುರುತಿಸಿಕೊಂಡಿದ್ದಾರೆ. ಹಾಗೆಯೆ ಆ ಮಠದ ಭಕ್ತರಾಗಿದ್ದಾರೆ. ಮಾಜಿ ಸಂಸತ್ತು ಸದಸ್ಯರಾದ ಚನ್ನಯ್ಯ ಒಡೆಯರ್ ಅವರು ಹೆಳವ ಸಮುದಾಯದವರು ಹಾಲುಮತ ಸಮುದಾಯದ ಸಹೋದರರೆಂದು ಹೇಳುತ್ತಿದ್ದರು ಮತ್ತು ಅದೇ ರೀತಿ ಕಾಣುತ್ತಿದ್ದರು. ಈ ಸಮುದಾಯದವರು ಅನ್ಯ ಧರ್ಮಗಳಿಂದ ಧರ್ಮಾಂತರ ಹೊಂದಿದ ಪ್ರಕರಣಗಳಿಲ್ಲ. ಆದರೆ ಈ ಸಮುದಾಯ ದವರು ಶರಣ ಸಂಪ್ರದಾಯದೊಂದಿಗೆ ದೀಕ್ಷೆ ಪಡೆದು ಶರಣ ಶರಣೆಯರಂತೆ ಜೀವನ ನಡೆಸಿದ್ದಕ್ಕೆ ಸಾಕಷ್ಟು ಉದಾಹರಣೆಗಳಿವೆ. ಈ ದೀಕ್ಷೆಯನ್ನು ಮಠಾಧಿಪತಿಗಳಿಂದ ಪಡೆದುದಾಗಿದೆ.

ಇವರು ತಮ್ಮ ಮೂಲ ಜಾತಿ ಪದ್ಧತಿಗಳಿಂದ ಇತರ ಬುಡಕಟ್ಟುಗಳಂತೆ ಯಾವುದೇ ರೀತಿಯ ಬದಲಾವಣೆ ಹೊಂದಿಲ್ಲ. ಆದರೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಚಿಲೂರು ಕಡದಕಟ್ಟೆ ಗ್ರಾಮದಲ್ಲಿ ಸ್ಥಳೀಯ ಲಂಬಾಣಿ ಮತ್ತು ಬಂಜಾರ ಕುಟುಂಬದವ ರೊಂದಿಗೆ ರಕ್ತಸಂಬಂಧ ಬೆಳಸಿ ಇಡೀ ಹೆಳವ ಸಮುದಾಯ ಲಂಬಾಣಿ ಬುಡಕಟ್ಟಿನವ ರಂತೆ ಬದಲಾವಣೆಯನ್ನು ಹೊಂದಿದೆ.

ಹಚ್ಚೆ : ಮಹಿಳೆಯರು ಹಣೆಗೆ, ಕೆನ್ನೆಗಳಿಗೆ, ಮುಂಗೈಗಳಿಗೆ ವಿವಿಧ ರೀತಿಯ ಹಚ್ಚೆಗಳನ್ನು ಹಾಕಿಸಿಕೊಳ್ಳುತ್ತಾರೆ. ಅಲ್ಲದೆ ತಮ್ಮ ಪ್ರೀತಿಯಿಂದ ಹೆಸರುಗಳನ್ನು ಕೈ ಮೇಲೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಸಂಪ್ರಾದಾಯಿಕವಾಗಿ ಈವರೆಗೂ ಈ ಪದ್ಧತಿ ಮುಂದುವರೆದು ಕೊಂಡುಬಂದಿದೆ.



# ೧೦

# ಸಮಸ್ಯೆ ಸಂಘಟನೆ ಪರಿಹಾರ

ಸಮಸ್ಯೆ : ೧೭೭೪ ಮತ್ತು ೧೮೭೧ರ ನಡುವಿನ ಭಾರತದ ಇತಿಹಾಸ ಅತ್ಯಂತ ರಕ್ತ ಪಾತದಿಂದ ಕೂಡಿದ ಇತಿಹಾಸವಾಗಿದೆ. ಭಾರತದ ಸ್ಥಳೀಯ ರಾಜ್ಯಗಳ ವಿರುದ್ಧ ಈ ಅವಧಿಯಲ್ಲಿ ಇಂಗ್ಲೀಷರ ಕಂಪನಿ ಆಡಳಿತವು ಅತ್ಯಂತ ಕ್ರೂರ ಯುದ್ಧಗಳನ್ನು ಮಾಡಿತು. ಆಂಗ್ಲೋ ಮರಾಠಾ ಯುದ್ಧ, ಮೈಸೂರು ಯುದ್ಧ, ಹೋಳ್ಕರ್ ಶರಣಾಗತಿ, ಪೇಶ್ವೆಗಳ ಸೋಲು, ವೆಲ್ಲೂರಿನ ಸಿಪಾಯಿದಂಗೆ, ಮೈಸೂರು ಮತ್ತು ಕೂರ್ಗ್‌ಗಳನ್ನು ವಶಪಡಿಸಿಕೊಂಡಿದ್ದು, ಸಿಂದ್, ಸಿಖ್, ಔಧ್, ಪ್ರದೇಶಗಳನ್ನು ಯುದ್ಧಗಳ ಮೂಲಕ ವಶಪಡಿಸಿಕೊಂಡಿದ್ದು ಮತ್ತು ೧೮೫೭ರಲ್ಲಿ ನಡೆದ ಸಿಪಾಯಿ ದಂಗೆಗಳು, ಹಲವು ಸ್ಥಳೀಯ ಸಮುದಾಯಗಳನ್ನು ನೆಲೆ ಇಲ್ಲದಂತೆ ಮಾಡಿದವು. ಈ ಸಮುದಾಯಗಳೇ ಮುಂದೆ ಅಲೆಮಾರಿಗಳಾಗಿ ಪರಿವರ್ತಿತವಾದವು.

ಇಂದು ಅನೇಕ ಅಲೆಮಾರಿಗಳು ನೆಲೆನಿಂತು ಬದುಕುತ್ತಿದ್ದರು ಸಹ ಕೆಲವು ಗುಂಪುಗಳು ಇನ್ನೂ ಅಲೆಮಾರಿಗಳಾಗಿಯೇ ಇದ್ದುಕೊಂಡು ಪಾರಂಪರಿಕ ಕಸಬನ್ನೇ ಮುಂದುವರೆಸಿವೆ. ಡೊಂಬರು, ಕಾಡುಗೊಲ್ಲರು, ಗೊಂದಲಿಗರು, ಶಿಳ್ಳೇಕ್ಯಾತರು, ಹೆಳವರು, ಹಕ್ಕಿ ಪಿಕ್ಕಿಗಳು ಸೇರಿದಂತೆ ಇನ್ನೂ ಅನೇಕ ಅಲೆಮಾರಿ ಸಮುದಾಯಗಳು ಪಾರಂಪರಿಕ ಕಸಬಿನ ಮೂಲಕ ಬದುಕುತ್ತಿವೆ. ಹೆಳವರಂತೂ ತಮ್ಮ ಕುಟುಂಬ ಮಕ್ಕಳೊಂದಿಗೆ ಚಕ್ಕಡಿ ಮುಖಾಂತರ ಒಕ್ಕಲು ಮನೆಗಳಿಗೆ ಹೋಗುತ್ತಿರುವದನ್ನು ಬೆಳಗಾವಿ, ವಿಜಾಪುರ ಹಾಗೂ ದಕ್ಷಿಣ ಕರ್ನಾಟಕದ ಎತ್ತಿನ ಹೆಳವರು, ಗಂಟೆ ಹೆಳವರು, ಚಾಪೆ ಹೆಳವರು ಹಲವು ಗುಂಪುಗಳು ಪಾರಂಪರಿಕ ವೃತ್ತಿಯಲ್ಲಿಯೇ ತೊಡಗಿರುವುದು ಕಂಡುಬರುತ್ತದೆ. ಎತ್ತಿನ ಹೆಳವ ಪಂಗಡದ ಗುಂಪುಗಳು ಹೆಚ್ಚಾಗಿ ಅಲೆಮಾರಿಗಳಾಗಿ ಬದುಕುವನ್ನು ಕಾಣುತ್ತೇವೆ.

ವೃತ್ತಿಗಳನ್ನು ಅವಲಂಬಿಸಿರುವ ಬಹುತೇಕ ಎಲ್ಲಾ ಸಮುದಾಯಗಳು ಸಾಮಾಜಿಕ ಅವಮಾನವನ್ನು ಮೀರಿ ನಿಲ್ಲಲು ತಮ್ಮ ವೃತ್ತಿಗಳನ್ನು ಬಿಟ್ಟು ಕೊಡಲೇಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಆಧುನಿಕ ಜಗತ್ತಿನಲ್ಲಿ ಬಿಡಿಗಾಸನ್ನೂ ತರದ ಮತ್ತು ಹಿಂಸಾತ್ಮಕ ಸಾಮಾಜಿಕ ಅವಮಾನಕ್ಕೆ ಕಾರಣವಾಗುವ ಪಾರಂಪರಿಕ ವೃತ್ತಿಗಳನ್ನು ಅವರು ಬಿಟ್ಟುಕೊಡುತ್ತಿದ್ದಾರೆ. ಆದರೆ ಈ ಅಲೆಮಾರಿಗಳಿಗೆ ಈ ಅನುಕೂಲತೆಯೂ

ಇಲ್ಲ. ಈ ಸಮುದಾಯಗಳು ಒಪ್ಪತ್ತಿನ ಊಟಕ್ಕೆ ತಮ್ಮ ವೃತ್ತಿಗಳನ್ನು ಇನ್ನೂ ಅನುಸರಿಸಲೇಬೇಕಾದ ಅನಿವಾರ್ಯತೆಯ ಮುಂದೆ ಮಂಡಿಯೂರಿಬಿಟ್ಟಿವೆ.

ಈಗಾಗಲೇ ಬಹುತೇಕ ಅಲೆಮಾರಿಗಳು ನೆಲೆನಿಂತಿದ್ದಾರೆ. ಆದರೆ ಮುಖ್ಯವಾಹಿನಿಯ ಆರ್ಥಿಕ ಚಲನೆಗಳ ಜೊತೆ ಅವರಿಗೆ ಅನುಸಂಧಾನ ಸಾಧ್ಯವಾಗುತ್ತಿಲ್ಲ. ಅಲೆಮಾರಿಗಳ ವರ್ತಮಾನದ ಸ್ಥಿತಿಗತಿಗಳಿಗೂ ಮತ್ತು ಕೆಳಜಾತಿ ಸಮುದಾಯಗಳ ಸ್ಥಿತಿಗತಿಗಳಿಗೂ ಭಾರತದ ಸಾಮಾಜಿಕ ಅಧಿಕಾರದ ಹಂಚಿಕೆಯ ವ್ಯವಸ್ಥೆಯಲ್ಲಿ ಒಂದೇ ಬಗೆಯ ಕಾರಣಗಳಿದ್ದರೂ ಸಹ ಅಲೆಮಾರಿಗಳ ಸಮಸ್ಯೆ ತುಸು ಸಂಕೀರ್ಣವಾಗಿದೆಯೆಂದೇ ಅಭಿಪ್ರಾಯ ಪಡಬೇಕಿದೆ.

ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ವಲಯಗಳಲ್ಲಿ ಅರ್ಹ ಸೌಲಭ್ಯಗಳನ್ನು ಪಡೆಯುವಾಗ ಈ ಸಮುದಾಯಗಳು ತಲ್ಲಣಗೊಳ್ಳುತ್ತವೆ. ಜಾತಿ ಪ್ರಮಾಣಪತ್ರ ಪಡೆಯುವ ಪ್ರಾಥಮಿಕ ಹಂತದಿಂದಲೂ ಇವು ಹೋರಾಟ ನಡೆಸಬೇಕಿದೆ.

ಅಲೆಮಾರಿ ಹೆಳವರು ಇಂದು ಅವರಿರುವ ಸ್ಥಿತಿಯಲ್ಲಿ ಆಧುನಿಕ ಜಗತ್ತಿನ ಯಾವ ಸವಲತ್ತುಗಳನ್ನು ಪಡೆದುಕೊಳ್ಳುವ ಸ್ಥಿತಿಯಲ್ಲಿಲ್ಲ. ಒಂದು ಅರ್ಥದಲ್ಲಿ ಅಲೆಮಾರಿ ಹೆಳವರು ತಮ್ಮ ಪಾರಂಪರಿಕ ವೃತ್ತಿಗೆ ತೀವ್ರವಾಗಿ ನಿಷ್ಠರಾಗಿದ್ದಾರೆ. ಪಾರಂಪರಿಕ ಕಸಬನ್ನು ಅತ್ಯಂತ ಭಾವುಕವಾಗಿ ವರ್ತಮಾನದಲ್ಲಿ ಮುಂದುವರೆಸುತ್ತಿರುವುದರ ಕುರಿತು ಅವರು ಮಾತನಾಡುತ್ತಾರೆ.

ಹೆಳವರು ಪಾರಂಪರಿಕವಾಗಿಯೇ ಒಂದು ಅವಲಂಬಿತ ಸಮುದಾಯ. ಸಹಜವಾಗಿಯೇ ತಮ್ಮ ಕುಲ ಕೊಂಡಾಡುವ ವಂಶಾವಳಿಯ ವಿವರಗಳನ್ನು ದಾಖಲಿಸುತ್ತಾ ಅದನ್ನೇ ತಮ್ಮ ಆರ್ಥಿಕ ಚಟುವಟಿಕೆಯಾಗಿ ಮುಂದುವರೆಸಿದರು. ಈ ಚಟುವಟಿಕೆಯೇ ಅವರನ್ನು ಅಲೆಮಾರಿಗಳನ್ನಾಗಿಸಿತು. ಆದರೆ ಪಾರಂಪರಿಕ ವೃತ್ತಿಯಲ್ಲಿ ನಿಶ್ಚಿತ ಆದಾಯ ಮೂಲಗಳಿಲ್ಲದೆ ಬದುಕುತ್ತಿದ್ದಾರೆ.

ಹೆಳವರಿಗೆ ನಿಶ್ಚಿತ ಆರ್ಥಿಕ ಮೂಲಗಳಿಲ್ಲದೇ ಇರುವುದು. ಯಾವ ಸಮುದಾಯವು ಕೇವಲ ಅನಿಶ್ಚಿತ ಮತ್ತು ಅವಲಂಬಿತ ಆರ್ಥಿಕ ಮೂಲಗಳನ್ನು ನೆಚ್ಚಿಕೊಂಡಿರುತ್ತದೆಯೋ ಆ ಸಮುದಾಯವು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಯಾವತ್ತೂ ಹಿನ್ನಡೆಯನ್ನು ಅನುಭವಿಸುತ್ತಲೇ ಇರುತ್ತದೆ. ವರ್ತಮಾನವನ್ನು ಚರಿತ್ರೆಯ ನೆನಪುಗಳಿಂದ ಎದುರಿಸುವುದು ಸಾಧ್ಯವಿಲ್ಲ. ಹೆಳವರು ಆರ್ಥಿಕವಾಗಿ ಹಿನ್ನಡೆ ಅನುಭವಿಸುವುದರ ಜೊತೆಗೆ ಸಾಮಾಜಿಕ ಮತ್ತು ಶೈಕ್ಷಣಿಕ ರಂಗಗಳಲ್ಲಿಯೂ ಶೋಚನೀಯವಾಗಿ ಹಿಂದುಳಿದಿದ್ದಾರೆ.

ಈ ಹೆಳವ ಸಮುದಾಯವನ್ನು ವ್ಯವಸ್ಥಿತವಾಗಿ, ಆರ್ಥಿಕವಾಗಿ ಮುನ್ನಡೆಸದಿದ್ದಲ್ಲಿ ಇವರನ್ನು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಬಲೀಕರಿಸಲು ಸಾಧ್ಯವಿಲ್ಲ. ಅದರಲ್ಲೂ ಶೈಕ್ಷಣಿಕವಾಗಿ ಸಬಲಗೊಳ್ಳದ ಯಾವ ಸಮುದಾಯ ವರ್ತಮಾನವನ್ನು ಎದುರಿಸಿ ನಿಲ್ಲಲು ಸಾಧ್ಯವೂ ಇಲ್ಲ. ಈ ಕಾರಣದಿಂದ ಹೆಳವ ಸಮುದಾಯವನ್ನು ಆರ್ಥಿಕವಾಗಿ ಸಬಲಗೊಳಿಸಿದರೆ ಅದು ಶೈಕ್ಷಣಿಕವಾಗಿ ಸಾಮಾಜಿಕವಾಗಿ ಸಬಲಗೊಳ್ಳಲು ಸಾಧ್ಯವಾಗುತ್ತದೆ.

ಸಮುದಾಯದವರು ಮೊದಲು ತಮ್ಮ ಅಭಿವೃದ್ಧಿಯ ಸಲುವಾಗಿ ಮಾನಸಿಕವಾಗಿ ಚಿಂತನೆಯುಳ್ಳವರಾಗಬೇಕಿದೆ. ಮೂಲವೃತ್ತಿಯನ್ನು ಉಳಿಸಿಕೊಂಡು ಸಮಾಜದ ಮುಖ್ಯ ವಾಹಿನಿಗೆ ಸೇರಬೇಕೇ ಅಥವಾ ಮೂಲವೃತ್ತಿಯನ್ನು ಸಂಪೂರ್ಣವಾಗಿ ಕೈಬಿಟ್ಟು ಸಮಾಜದ ಮುಖ್ಯವಾಹಿನಿಗೆ ಸೇರಬೇಕೆ ಎಂಬ ಬಗ್ಗೆ ಸಮಾಜ ಹೆಚ್ಚು ಚಿಂತಿಸಬೇಕಾಗಿದೆ. ಮೂಲವೃತ್ತಿಯನ್ನು ಕೈಬಿಟ್ಟರೆ ಹೊಟ್ಟೆಪಾಡು ನಡೆಯುವುದಿಲ್ಲ. ಆದರೆ ಮೂಲವೃತ್ತಿಯನ್ನೇ ಅವಲಂಬಿಸಿದಲ್ಲಿ ಸಮಾಜವನ್ನು ಮುಖ್ಯವಾಹಿನಿಗೆ ತರಲೂ ಸಾಧ್ಯವಾಗಿವುದಿಲ್ಲ. ಈ ಸಮುದಾಯದ ಕ್ರಾಂತಿಕಾರಕ ಬದಲಾವಣೆ ಆಗಬೇಕಾದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಸಮುದಾಯದವರಿಗೆ ದೊರೆಯುವ ಸೌಲಭ್ಯಗಳು ದೊರೆಯುವಂತೆ ಸಂವಿಧಾನ ತಿದ್ದುಪಡಿ ಮಾಡಿ ಸಂವಿಧಾನಿಕ ರಕ್ಷಣೆಕೊಡಬೇಕಾಗಿದೆ.

**ಸಂಘಟನೆ**

ಧಾರ್ಮಿಕವಾಗಿ ಅಲೆಮಾರಿ ಸಮುದಾಯದ ಸಂಘಟನೆ ಬೇರೆ ಇತರ ಪರಿಶಿಷ್ಟರಂತೆ, ಹಿಂದುಳಿದ ವರ್ಗ ಮತ್ತು ಮೇಲ್ಜಾತಿಯವರಂತೆ ಅಷ್ಟೊಂದು ಸುಸಂಘಟಿತವಾಗಿ ಸಂಘಟಿಸಿದ ಸಂಘಟನೆಗಳಿಲ್ಲ. ಆದರೆ ಕರ್ನಾಟಕ ಸರ್ಕಾರ ೨೦೦೬-೦೭ರಲ್ಲಿ ಈ ಸಮುದಾಯವನ್ನೊಳಗೊಂಡ ಇತರ ಅಲೆಮಾರಿ ಸಮುದಾಯಗಳಿಗೆ ರಾಜ್ಯ ಮಟ್ಟದಲ್ಲಿ, ಜಿಲ್ಲಾಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಸರ್ಕಾರದ ಸಮಿತಿಗಳನ್ನು ರಚಿಸಿ ಪ್ರಾತಿನಿಧ್ಯ ನೀಡಿದ್ದರಿಂದ ಸಮುದಾಯದ ಸಂಘಟನೆಗೆ ಸಾಕಷ್ಟು ಸಹಾಯವಾಗಿದೆ. ಜಾತ್ಯಾತೀತ ಜನತಾದಳದ ನಾಯಕ ಎಚ್ ಡಿ ದೇವೆಗೌಡರು, ಮಾಜಿ ಮುಖ್ಯಮಂತ್ರಿ ಎಚ್ ಡಿ ಕುಮಾರಸ್ವಾಮಿ, ಮಾಜಿ ಗೃಹಸಚಿವ ಎಂ ಪಿ ಪ್ರಕಾಶ್ ಅವರು, ಸಮಾಜ ಕಲ್ಯಾಣ ಇಲಾಖೆ ಮಾಜಿ ಸಚಿವ ಬಾಲಚಂದ್ರ ಜಾರಕಿಹೊಳಿ ಅವರು, ವಿಧಾನ ಪರಿಷತ್ ಸದಸ್ಯರಾದ ವಾಯ್ ಎಸ್ ವಿ ದತ್ತಾ ಅವರು ಈ ಸಮುದಾಯದ ಆಳವಾದ ಅನುಭವವುಳ್ಳ ಹಿರಿಯ ನ್ಯಾಯವಾದಿ ಎಂ ಎಸ್ ಹೆಳವರ್ ಅವರನ್ನು ಗುರುತಿಸಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗದ ಸದಸ್ಯರನ್ನಾಗಿ ನೇಮಿಸಿ ಸಮುದಾಯದ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇವೆ ಮಾಡಲು ಅವಕಾಶ ಮಾಡಿ ಕೊಟ್ಟಿದ್ದಾರೆ. ಇದು ಸಂಘಟನೆಗೆ ಸಾಕಷ್ಟು ಸಹಾಯವಾಗಿದೆ.

**ಹೆಳವ ಸಮುದಾಯದ ಸಂಘಟನೆಗಳು**

ಕರ್ನಾಟಕ ರಾಜ್ಯದಲ್ಲಿ ಹೆಳವ ಸಮುದಾಯವು ಅಲ್ಪಸಂಖ್ಯೆ ಹೊಂದಿದ ಅಲೆಮಾರಿ ಗುಂಪಿಗೆ ಸೇರಿದ್ದು ಶಿಕ್ಷಣವಿಲ್ಲದೆ, ರಾಜಕೀಯ, ಸಾಮಾಜಿಕ ಸ್ಥಾನಮಾನಗಳಿಲ್ಲದೆ ಜೀವನಕ್ಕಾಗಿ ಅಲೆದಾಡುವುದೇ ಆಯಿತು. ಕಾಲ ಉರುಳಿದರೂ ಸಮಾಜದ ಅಭಿವೃದ್ಧಿಗೆ ಸಂಘಟನೆ ಇಲ್ಲದೆ ಒಬ್ಬರಿಗೊಬ್ಬರು ತಿಳುವಳಿಕೆ ಮೂಡಿಸಿಕೊಳ್ಳದೆ ನಡೆದುಬಂದ ದಾರಿ ಆಗಿದೆ. ವರ್ಷಕ್ಕೊಮ್ಮೆ ಒಕ್ಕಲುಮನೆಗಳಿಗೆ ಹೋಗುವುದು, ಅವರ ವಂಶಾವಳಿ ಹೇಳುವದು, ಅವರು ನೀಡಿದ ದವಸಧಾನ್ಯ, ಬಟ್ಟೆ, ಪಾತ್ರೆ, ದನಕರುಗಳನ್ನು ಪಡೆದು ಬಂದುದೇ ಇವರ ಕಾಯಕವಾಗಿದೆ. ಹೀಗಿರುವಾಗ ಒಂದು ಸಂಘಟನೆಗೆ ತಿರುವು ಬಂದುದು ೧೯೫೫ರಲ್ಲಿ.

**ಹೊಸಹಳ್ಳಿ :** ಡಾ ಎಚ್ ಎಸ್ ಚಂದ್ರಪ್ಪ ನಿವೃತ್ತರಾಗಿ ವಿಶ್ರಾಂತಿ ಜೀವನದಲ್ಲಿ ಇದ್ದಾರೆ. ಇವರು ವಿದ್ಯಾರ್ಥಿ ಜೀವನದಲ್ಲಿ ಹೊಸಹಳ್ಳಿಯಲ್ಲಿ ಅಖಿಲ ಮೈಸೂರು ***ಸಾಧುಹೆಳವ ಸಮಾಜ ಸಂಘ***ವನ್ನು ಶ್ರೀ ಅಡ್ಡಮನೆ ಹನುಮಪ್ಪನವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಿದರು. ಎಸ್ ಕೆ ದಾಸ್ ಕಾರ್ಯದರ್ಶಿಯಾಗಿದ್ದರು. ೧೧ ಜನ ಸದಸ್ಯರಾಗಿ ೧೫.೫.೧೯೫೦ ರಂದು ಕರಪತ್ರ ಪ್ರಕಟಿಸಿ ಎಲ್ಲಾ ಹೆಳವರಿರುವ ಗ್ರಾಮಗಳಿಗೆ ತಿಳಿಸಿದ್ದು ತಿಳಿದುಬರುತ್ತದೆ. ಇದು ಸಂಘಟನೆಯ ಮೊದಲ ಹೆಜ್ಜೆ.

**ಮಲ್ಲಿಗೆರೆ :** ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕು ಸೋಮಸಾಗರದ ಶ್ರೀ ಕೊಟ್ಟೂರೇಶ್ವರ ಶಾಸ್ತ್ರೀ ಹಿರೇಮಠ ಇವರು ಸಾಮಾಜಿಕ, ರಾಜಕೀಯ ಕಾರ್ಯಕರ್ತರಿದ್ದು ಹೆಳವ ಸಮಾಜದ ಅಭಿಮಾನಿಗಳಾಗಿದ್ದರು. ಹೆಳವ ಸಮುದಾಯವನ್ನು ಒಂದೆಡೆ ಸೇರಿಸಿ ಸಂಘಟಿಸುವ ವಿಚಾರವಾಗಿತ್ತು. ಆ ದೃಷ್ಟಿಯಿಂದ ಹೆಳವ ಸಮಾಜದ ಊರೂರು ತಿರುಗಿ ***ಅಖಿಲ ಕರ್ನಾಟಕ ಪ್ರಾಂತಿಕ ಹೆಳವ ಸಮಾಜ***ದ ಮೊದಲನೆಯ ಮಹಾಪರಿಷತ್ತು ಮಲ್ಲಿಗೆರೆ ಚನ್ನಗಿರಿ ತಾಲ್ಲೂಕು ಇಲ್ಲಿ ೨೨.೧೦.೧೯೬೧ ರಂದು ಮೈಸೂರು ರಾಜ್ಯದ ಸಮಾಜಕಲ್ಯಾಣ ಹಾಗೂ ಕೃಷಿ ಇಲಾಖೆಗಳ ಸಚಿವರಾದ ಎಸ್ ರಾಚಯ್ಯನವರು, ಗೃಹಖಾತೆ ಉಪಸಚಿವರಾದ ಬಿ ಬಸವಲಿಂಗಪ್ಪ ಅವರ ಮುಖಂಡತ್ವದಲ್ಲಿ ಪರಿಷತ್ತು ನಡೆಯಿತು. ಮಲ್ಲಿಗೆರೆ ಗ್ರಾಮವನ್ನು ಸರ್ಕಾರ ಅಧಿಪತ್ಯದಲ್ಲಿ ಹೊಸ ಗ್ರಾಮವನ್ನಾಗಿ ನಿವೇಶನ ಸಹಿತ ಮನೆಗಳನ್ನು ಕಟ್ಟಿಸಿ ಕೊಡಲು ಸರ್ಕಾರ ಆದೇಶಿಸಿತು. ಪ್ರತಿಯೊಂದು ಕುಟುಂಬಕ್ಕೂ ನಾಲ್ಕು ಎಕರೆ ಜಮೀನು, ಎತ್ತುಗಳು, ಬಿತ್ತನೆ ಬೀಜ, ಒಕ್ಕಲುತನ ಸಲಕರಣೆಗಳನ್ನು ಸಹ ಒದಗಿಸಿತು. ಸಾಮಾಜಿಕ ಜೀವನದಲ್ಲಿ ಬೆರೆಯುವ ಮಹತ್ವದ ಅಡಿಪಾಯ ಈ ಪರಿಷತ್ತದಾಯಿತು. ಈ ಪರಿಷತ್ತಿಗೆ ಸ್ವಾಗತ ಭಾಷಣ ಹಾಗೂ ಮನವಿಪತ್ರ ಅರ್ಪಿಸಿದವರು ಕೈದಾಳು ಕೋಟೆ ಹನುಮಪ್ಪನವರು.

**ಬೀರೂರು :** ವಿದ್ಯಾವಂತರಿಲ್ಲದ ಈ ಸಮುದಾಯಕ್ಕೆ ವಿದ್ಯಾವಂತರಾದವರನ್ನು ಹುಡುಕಿ ತರಲು ಶ್ರೀ ಕೊಟ್ಟೂರೇಶ್ವರ ಶಾಸ್ತ್ರೀಗಳು ಪ್ರಯತ್ನಿಸಿದರ ಫಲವಾಗಿ ಬಿಎಸ್ ಸಿ ಪದವಿ ಮುಗಿಸಿ, ಧಾರವಾಡ ವಿಶ್ವವಿದ್ಯಾನಿಲಯದಲ್ಲಿ ಫಾಯಿನಲ್ ಎಲ್ ಎಲ್ ಬಿ ಓದುತ್ತಿದ್ದ ಎಂ ಎಸ್ ಹೆಳವರನ್ನು ಕಂಡು ಪರಿಚಯ ಮಾಡಿಕೊಂಡು ಪರೀಕ್ಷೆ ಮುಗಿದ ಬಳಿಕ ಶ್ರೀ ಹೆಳವರನ್ನು ಬೀರೂರಿಗೆ ಹುಲಗಣ್ಣನವರ ಎಂ ಬಿ ಉಪಾಧ್ಯಾಯರ ಜೊತೆಗೆ ಕರೆತಂದು ಸಮಾಜಕ್ಕೆ ಶ್ರೀ ಕೊಟ್ಟೂರೇಶ್ವರ ಶಾಸ್ತ್ರಿಗಳು ಪರಿಚಯಿಸಿದರು. ಬೀರೂರು ಹೆಳವ ಸಮಾಜದವರು ಮನೆ ಮಾಡಿಕೊಟ್ಟು ಎಲ್ಲ ರೀತಿಯ ಸಹಕಾರ ನೆರವು ೧೯೬೩ ರಲಿ ನೀಡಿದರು. ಎಂ ಎಸ್ ಹೆಳವರ್ ಲಾಯರ್ ಆಗಿ ಕಡೂರು ಕೋರ್ಟಿಗೆ ಓಡಾಡಹತ್ತಿದರು. ರಾಜಕೀಯದಲ್ಲಿ ಇವರನ್ನು ಗುರುತಿಸಲು ಬೀರೂರಲ್ಲಿ ಹೆಳವ ಸಮಾಜದ ಪರಿಷತ್ತು ಕರೆಯಲು ಸಮಾಜ ಬಾಂಧವರು ನಿರ್ಧರಿಸಿದರು. ಮಟ್ಟಿಕೋಟೆ ಎಂ ಎಚ್ ನಿಂಗಪ್ಪನವರು ಮಲ್ಲಿಗೆರೆಯಲ್ಲಿ ***ಅಖಿಲ ಕರ್ನಾಟಕ ಹೆಳವರ ಹಿತಾಭಿವೃದ್ಧಿ ಸಂಘ*** ಸ್ಥಾಪಿಸಿ ಅದರ ಅಧ್ಯಕ್ಷರಾಗಿದ್ದರು. ಇವರ ಮುಖಂಡತ್ವದಲ್ಲಿ

ಬೀರೂರು ಮಹಾಪರಿಷತ್ತನ್ನು ಸಂಘಟಿಸಲಾಯಿತು. ೧೬.೨.೧೯೬೪ ರಂದು *ಹೆಳವ ಸಮಾಜದ ದ್ವಿತೀಯ ಪರಿಷತ್ತು* ಬೀರೂರಿನಲ್ಲಿ ಜರುಗಿತು. ಇದರ ಉದ್ಘಾಟನೆಯನ್ನು ಎಂ ಎಸ್ ಹೆಳವರ ನ್ಯಾಯವಾದಿಗಳು ಕಡೂರು ಅವರು ಮಾಡಿದರು. ಕೆ ಪ್ರಭಾಕರ ಸಮಾಜಕಲ್ಯಾಣ ಇಲಾಖೆ ಮಂತ್ರಿಗಳು ಮುಖ್ಯ ಅತಿಥಿಗಳಾಗಿ ಭಾಗಿಯಾಗಿದ್ದರು. ಅಂದಿನ ಸಮಾವೇಶದಿಂದ ಎಮ್ಮೆದೊಡ್ಡಿಹಟ್ಟಿ ಹೆಳವರಿಗೆ ಅಮೃತಮಹಾಲ ಕಾವಲು ಸರ್ಕಾರಿ ಜಮೀನನ್ನು ಪ್ರತಿಕುಟುಂಬಕ್ಕೆ ನಾಲ್ಕು ಎಕರೆಯಂತೆ ಮತ್ತು ಮನೆ, ಇತ್ಯಾದಿ ನೆರವುಗಳು ದೊರೆತವು. ಇಂದು ಇದೊಂದು ಹೆಳವರ ಮಾದರಿ ಗ್ರಾಮವಾಗಿದೆ.

**ಸೋಮಸಾಗರ :** ಧಾರವಾಡ ಜಿಲ್ಲಾ ಹಾನಗಲ್ ತಾಲ್ಲೂಕು ಸೋಮಸಾಗರದಲ್ಲಿ *ಸಂಚಾರಿ ಹೆಳವ ಸಮುದಾಯದ ನಾಲ್ಕನೇ ಮಹಾಪರಿಷತ್ತ*ನ್ನು ೧೯.೬.೧೯೭೪ ರಂದು ನಡೆಸಲಾಯಿತು. ಈ ಪರಿಷತ್ತನ್ನು ಎಫ್ ಎಚ್ ಮೋಹಸಿನ, ಗೃಹಖಾತೆ ಮಂತ್ರಿಗಳು ಕೇಂದ್ರ ಸರ್ಕಾರ ನ್ಯೂಡೆಲ್ಲಿ ಅವರು ಉದ್ಘಾಟಿಸಿದರು. ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮತ್ತು ಪಂಚಾಯತ್ ರಾಜ್ಯ ಸಚಿವರಾದ ಎಸ್ ರಾಚಯ್ಯನವರು ಮುಖ್ಯ ಅತಿಥಿಗಳಾಗ ಆಗಮಿಸಿದ್ದರು. ಶಾಸಕರಾದ ಪಿ ಸಿ ಶೆಟ್ಟರ್ ಅಧ್ಯಕ್ಷತೆ ವಹಿಸಿದ್ದರು. ಸಿದ್ದಪ್ಪ ಸಿಂಧೂರು, ಶಾಸಕರಾದ ವಾಯ್ ಬಿ ಜೋಗಣ್ಣನವರ ಮಾಜಿ ಮಂತ್ರಿ ಕೆ ಎಫ್ ಪಾಟೀಲ ಆಗಮಿಸಿದ್ದರು. ಸಂಘಟಕರಾದ ಪಂ ಕೊಟ್ಟುರೇಶ್ವರ ಶಾಸ್ತ್ರಿಗಳು ಸ್ವಾಗತ ಭಾಷಣ ಮಾಡಿದರು. ಪರಿಷತ್ತಿನ ಕಾರ್ಯದರ್ಶಿ ಮಲ್ಲಿಕಾರ್ಜುನ ಹುಲಗಣ್ಣ ನವರ ಸಚಿವರಿಗೆ ಮಾನಪತ್ರ ಸಮರ್ಪಿಸಿದರು. ಇವು ಸಂಘಟನೆಗೆ ಮಾದರಿಯಾದವು.

**ಗುಲಬರ್ಗಾ :** ೧೯೭೪ರ ಸಮ್ಮೇಳನ ನಂತರ ಎಲ್ಲಿಯೂ ಸಂಘಟನೆಗಳು ನಡೆಯದೆ ಸಮಾಜದ ಬಗ್ಗೆ ಚಿಂತನೆ ಮಾಡುವ ವ್ಯಕ್ತಿಗಳ ಬರವಾಯಿತು. ಡಿ ದೇವರಾಜು ಅರಸು ಅವರ ಜನ್ಮದಿನಾಚರಣೆ ಅಂಗವಾಗಿ ಗುಲಬರ್ಗಾ ವಿಭಾಗ ಮಟ್ಟದ ಹೆಳವ ಜನಾಂಗದ ಕಾರ್ಯಾಗಾರ ಮತ್ತು ಸಮ್ಮೇಳನವನ್ನು ದಿವಂಗತ ಡಿ ದೇವರಾಜ್ ಅರಸು ಸಂಶೋಧನಾ ಸಂಸ್ಥೆ, ಬೆಂಗಳೂರು ಹಾಗೂ ಗುಲಬರ್ಗಾ ವಿಭಾಗದ ಎಲ್ಲಾ ಜಿಲ್ಲಾ ಹೆಳವ ಸಮಾಜದ ಸಂಘಗಳ ಸಂಯುಕ್ತಾಶ್ರಯದಲ್ಲಿ ೨೩.೮.೧೯೯೭ ರಂದು ಗುಲಬರ್ಗಾ ನಗರದ ಶ್ಯಾನಭಾಗ ಕಲ್ಯಾಣ ಮಂಟಪದಲ್ಲಿ ನಡೆಸಲಾಯಿತು. ಕರ್ನಾಟಕ ಸರ್ಕಾರದ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ಕಲ್ಯಾಣ ಇಲಾಖೆ ಸಚಿವರಾದ ಮಾಲಿಕಯ್ಯ ವ್ಹಿ ಗುತ್ತೇದಾರ ಅವರು ಸಮ್ಮೇಳನವನ್ನು ಉದ್ಘಾಟಿಸಿದರು. ಲೋಕಸಭಾ ಸದಸ್ಯರು, ಶಾಸಕರು, ನಗರದ ಅನೇಕ ಗಣ್ಯ ವ್ಯಕ್ತಿಗಳು ಭಾಗವಹಿಸಿದ್ದರು. ನಗರದ ತುಂಬಾ ಹೆಳವ ಸಮಾಜದವರು ಮೆರವಣಿಗೆ ಮಾಡಿದರು. ಸಚಿವರು ಮಾಂಗಲ್ಯ ಭಾಗ್ಯ ಯೋಜನೆಯನ್ನು ಈ ಸಂದರ್ಭದಲ್ಲಿ ಘೋಷಿಸಿದರು. ಈ ಸಮ್ಮೇಳನ ಸಂಘಟನೆಯನ್ನು ಮಲ್ಲಿಕಾರ್ಜುನ, ದಾಸಪ್ಪ, ಬಸವರಾಜ ಯಾಳಗಿ ಹಾಗೂ ಹುಲಗಣ್ಣ ನವರ ಮುಂತಾದವರು ಎಲ್ಲಾ ಜಿಲ್ಲೆಗಳಲ್ಲಿ ಸಂಚರಿಸಿ ಸಮಾಜದ ಜನರನ್ನು ಕೂಡಿಸುವಲ್ಲಿ ಯಶಸ್ವಿಯಾದರು.

*ಕರ್ನಾಟಕ ರಾಜ್ಯ ಹೆಳವರ ಸಮುದಾಯ ಸಂಘ (ರಿ)* ಚನ್ನಸಂದ್ರ, ಬೆಂಗಳೂರು ಇದು ನೋಂದಣಿ ಸಂಖ್ಯೆ ೧೫೦:೮೩-೮೪ ರೊಂದಿಗೆ ಎಂ ಎಸ್ ಹೆಳವರ ನ್ಯಾಯವಾದಿಗಳು ಕಡೂರು ಇವರು ಮುಖಂಡತ್ವದಲ್ಲಿ ಆರಂಭಗೊಂಡಿತು.

**ಚಳ್ಳಕೆರೆ :** ಚಿತ್ರದುರ್ಗ ಜಿಲ್ಲೆ ಚಳ್ಳಕೆರೆಯಲ್ಲಿ *ಕರ್ನಾಟಕ ಹೆಳವರ ಸಮುದಾಯ* (ರಿ) ರಾಜ್ಯ ಸಮಿತಿ ಜಂಟಿಕಾರ್ಯದರ್ಶಿ ಜಡೆಕುಂತೆ ಜಿ ಗೋವಿಂದಪ್ಪ ಅವರು ಎಲ್ಲಾ ಜಿಲ್ಲೆಗಳ ಹೆಳವ ಸಮಾಜವರನ್ನೊಳಗೊಂಡು ಮೂರನೇ ಹೆಳವ ಸಮಾಜದ ಸಮ್ಮೇಳನವನ್ನು ಎಂ.ಎಸ್. ಹೆಳವರ್ ನ್ಯಾಯವಾದಿಗಳೂ ಕಡೂರು ಇವರ ಹಿರಿತನದಲ್ಲಿ ೮.೪.೧೯೮೪ ರಂದು ಸಂಘಟಿಸಲಾಯಿತು. ಸಮ್ಮೇಳನದ ಪೂರ್ತಿ ಉಸ್ತುವಾರಿಯನ್ನು ಸ್ಥಳೀಯ ಶಾಸಕರ ಸಹಕಾರದಿಂದ ಗೋವಿಂದಪ್ಪನವರು ಮಾಡಿದ್ದು ಮರೆಯಲಾರದ ಮಾತಾಗಿದೆ.

**ಧಾರವಾಡ :** ಉತ್ತರ ಕನಾರ್ಟಕದ ಹೆಳವ ಸಮಾಜದವರು ಬಹಳ ಬಡವರು. ಊಳಲು ಜಮೀನು ಇಲ್ಲ. ವಾಸಿಸಲು ಮನೆ ಇಲ್ಲ. ಹರುಕು ಮುರುಕು ಗಾಡಿಯಲ್ಲಿ ಮಕ್ಕಳೊಂದಿಗೆ ಸಂಚಾರ ಮಾಡುವುದೇ ಇವರ ವೃತ್ತಿಯಾಗಿದೆ. ಇದನ್ನು ಗಮನಿಸಿ ಈ ಜನರನ್ನು ಪ್ರತ್ಯಕ್ಷ ಎದುರು ನಿಲ್ಲಿಸಿ ಸರ್ಕಾರದ ಗಮನಕ್ಕೆ ತರಲು ನಿಶ್ಚಯಿಸಿ ಮುಖ್ಯಮಂತ್ರಿಗಳಿಗೆ  ರಾಣೆಬೆನ್ನೂರು ಶಾಸಕರ ಮುಖಾಂತರ ಧಾರವಾಡ ಜಿಲ್ಲಾ ಹೆಳವ ಸಮಾಜದ ಅಧ್ಯಕ್ಷರಾದ ಎಂ ಬಿ ಹುಲಗಣ್ಣನವರ ಮನವಿ ನೀಡಿ ಡಿ ದೇವರಾಜ್ ಅರಸು ಸಂಶೋಧನಾ ಸಂಸ್ಥೆಯವರು ಬೆಳಗಾವಿ ವಿಭಾಗದ ಹೆಳವ ಸಮಾಜದ ಕಾರ್ಯಗಾರವನ್ನು ಸಂಯುಕ್ತಾಶ್ರಯದಲ್ಲಿ ಮಾಡಲು ನಿಶ್ಚಯಿಸಿದರು. ಹುಲುಗಣ್ಣನವರ ನಾಲ್ಕೂ ಜಿಲ್ಲೆಗಳಲ್ಲಿ ಹಿಂದುಳಿದ ವರ್ಗಗಳ ಅಧಿಕಾರಿಗಳೊಂದಿಗೆ ಒಂದು ತಿಂಗಳವರೆಗೆ ಪ್ರವಾಸ ಮಾಡಿ ಹೆಳವ ಸಮಾಜದವರನ್ನು ಕಾರ್ಯಾಗಾರದಲ್ಲಿ ಭಾಗವಹಿಸುವಂತೆ ತಿಳಿಸಿ ೨೬.೬.೧೯೯೯ ರಂದು ಧಾರವಾಡ ಕಲಾಭವನದಲ್ಲಿ ಈ ಕಾರ್ಯಾಗಾರ ಮಾಲಿಕಯ್ಯ ಗುತ್ತೆದಾರ ಸಚಿವರು ಹಿಂದುಳಿದ ಹಾಗೂ ಅಲ್ಪಸಂಖ್ಯಾತರ ಇಲಾಖೆ ಕರ್ನಾಟಕ ಸರ್ಕಾರ ಬೆಂಗಳೂರು ಮತ್ತು ಎಸ್ ಎಸ್ ಪಾಟೀಲ ಸಹಕಾರ ಸಚಿವರು ಮತ್ತು ಜಿಲ್ಲಾ ಪಂಚಾಯತ ಅಧ್ಯಕ್ಷರು ಸದಸ್ಯರು, ಹೆಳವ ಸಮಾಜದ ಮುಖಂಡರಾದ ಎಂ ಎಸ್ ಹೆಳವರ ಕೂಡ ವೇದಿಕೆಯ ಮೇಲೆ ಉಪಸ್ಥಿತಿರಿದ್ದರು. ಈ ಸಂದರ್ಭದಲ್ಲಿ ಕಾರ್ಯಾಗಾರದ ಯಶಸ್ವಿ ರೂವಾರಿ ಎಂ ಬಿ ಹುಲಗಣ್ಣನವರ ಅವರನ್ನು ಸಚಿವರು ಸನ್ಮಾನಿಸಿದರು. ಸರ್ಕಾರಕ್ಕೆ ಬೇಡಿಕೆಗಳ ಮನವಿಯನ್ನು ನಿರ್ದೇಶಕರು, ಡಿ ದೇವರಾಜ ಅರಸು ಸಂಶೋಧನಾ ಸಂಸ್ಥೆ ಅವರ ಮುಖಾಂತರ ಅರ್ಪಿಸಲಾಯಿತು.

**ಬೆಂಗಳೂರು :** ಕರ್ನಾಟಕದಲ್ಲಿ ಹೆಳವ ಸಮಾಜದ ಸಂಘಟನೆ ಮತ್ತು ಸರ್ಕಾರಕ್ಕೆ ಸಮಸ್ಯೆಗಳನ್ನು ತಿಳಿಸಲು ಸುಮಾರು ಐವತ್ತು ವರ್ಷಗಳ ಮೇಲೆ ಸಮಯ ಕಳೆದು ಹೋಯಿತು. ಆದಾಗ್ಯೂ ಪ್ರಬಲವಾಗಿ ಸಂಘ ಸ್ಥಾಪಿಸಿದ ರಾಜ್ಯಮಟ್ಟದಲ್ಲಿ ಯಾವ

ವ್ಯಕ್ತಿಯೂ ಹೋರಾಟಕ್ಕೆ ಇಳಿಯದೆ ಸಮಾಜವು ಇದ್ದ ಸ್ಥಿತಿಯಲ್ಲಿ ಉಳಿಯಿತು. ಬೆಂಗಳೂರಲ್ಲಿ ಅನೇಕ ವಿದ್ಯಾವಂತರು ನಿವೃತ್ತ ಅಧಿಕಾರಿಗಳು ಸೇರಿ ಸಮಾಜದ ಚಿಂತನೆ ಮಾಡಿದ್ದು ಗಮನಾರ್ಹ. ಹೊಸದಾಗಿ ಸಂಘ ಕಟ್ಟಿ ಬೆಳೆಸುವುದಕ್ಕಿಂತ ಎಂ ಎಸ್ ಹೆಳವರ್ ಅಧ್ಯಕ್ಷರಾಗಿ ಬೆಂಗಳೂರಲ್ಲಿ ೧೯೮೩ರಲ್ಲಿ ನೋಂದಾಯಿಸಿದ **ಅಖಿಲ ಕರ್ನಾಟಕ ಹೆಳವ ಸಮಾಜ (ರಿ)**, ಬೆಂಗಳೂರು ಎಂಬುದನ್ನು ಪರಾಮರ್ಶಿಸಿ ನವೀಕರಣ ಮಾಡಿ ಅದನ್ನೆ ಮುಂದುವರೆಸಿಕೊಂಡು ಹೋಗಲು ತೀರ್ಮಾನಿಸಿ, ಅದರ ಹಿಂದಿನ ಅಧ್ಯಕ್ಷರಾದ ರಂಗಯ್ಯನವರನ್ನು ಕಂಡು ಎಲ್ಲಾ ದಾಖಲೆಗಳನ್ನು ಪಡೆದು ನವೀಕರಿಸಿ ಹೊಸದಾಗಿ ಈ ಕೃಷ್ಣಪ್ಪ ಅವರ ಅಧ್ಯಕ್ಷತೆಯಲ್ಲಿ ಸಮಿತಿ ರಚನೆಯಾಗಿ ಮೂರು ವರ್ಷಗಳಾಗಿದೆ. ಇಡೀ ರಾಜ್ಯಾದ್ಯಂತ ಎಲ್ಲಾ ಜಿಲ್ಲಾ ಸಂಘಗಳನ್ನು ಹೊಸದಾಗಿ ರಚಿಸಿ ಒಳ್ಳೆಯ ಉದ್ದೇಶಗಳನ್ನು ಇಟ್ಟುಕಂಡು ಅವುಗಳ ಕಾರ್ಯಾಚರಣೆಯ ಸಾಧನೆ ಗಳನ್ನು ಈಗಾಗಲೇ ಸಮಾಜಕ್ಕೆ ಮಾಡಿ ತೋರಿಸುತ್ತಿರುವುದು ನೋಡಿ ಈ ಸಂಘದ ಬಗ್ಗೆ ಸಮಾಜದವರು ಹರ್ಷ ಪಡುತ್ತಿದ್ದಾರೆ ಮತ್ತು ಸಹಕಾರ ನೀಡಿದ್ದಾರೆ. ಅಲ್ಲದೆ ಹೆಳವ ಸಮಾಜಕ್ಕೆ ಬಸವಭೃಂಗೇಶ್ವರ ಸ್ವಾಮಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇದರಿಂದ ಸಂಘದ ಚಿಂತನೆ ಮತ್ತಷ್ಟು ಹೆಚ್ಚಾಗಿ ಹೊಸ ಸಮಾಜದ ಪ್ರಗತಿಪರ ಕಾರ್ಯಕ್ರಮಗಳು ಸಾಗುತ್ತಿವೆ. ದಾವಣಗೆರೆಯಲ್ಲಿ ಕರ್ನಾಟಕ ರಾಜ್ಯ ಹೆಳವ ಸಮುದಾಯದ ವಿದ್ಯಾರ್ಥಿನಿಲಯ ಕಟ್ಟಡ ರಚನೆಗೆ ರಾಜ್ಯ ಸಮಿತಿಯವರು ಬಹಳ ಕಾಳಜಿವಹಿಸಿ ಹಣಕಾಸು ನೆರವು ನೀಡಿದ್ದಾರೆ. ಅನೇಕ ಕಡೆ ಸಮುದಾಯ ಭವನ, ವಿದ್ಯಾಸಂಸ್ಥೆ ಕಟ್ಟಡ ಕಾರ್ಯನಡೆದಿದೆ ಹಾಗು ಕೆಲವು ಮುಗಿದಿವೆ. ದಿಟ್ಟತನದಿಂದ ಸಂಘ ಮುನ್ನಡೆದು ಸಮಾಜವನ್ನು ಎಚ್ಚರಿಸುತ್ತಿರುವುದು ಕಾಣುತ್ತಿದೆ.

**ಕರ್ನಾಟಕ ರಾಜ್ಯ ಅಲೆಮಾರಿ ಸಮುದಾಯಗಳ ಅಭಿವೃದ್ಧಿ ಸಂಸ್ಥೆ (ರಿ)** ಇದರ ಅಧ್ಯಕ್ಷರಾದ ಹೆಳವ ಸಮುದಾಯದ ಎಸ್ ರಾಮಸ್ವಾಮಿಯವರು ಕೇಂದ್ರ ಸರ್ಕಾರದಿಂದ ದೊರೆಯುವ ಹಣಕಾಸಿನ ನೆರವನ್ನು ರಾಜ್ಯ ಸರ್ಕಾರದ ಮುಖಾಂತರ ದೊರೆಯುವಲ್ಲಿ ದಿಟ್ಟತನದಿಂದ ಹೋರಾಟ ಮಾಡುತ್ತಾ ಅಲೆಮಾರಿ ಸಮುದಾಯದವರಿಗೆ, ನಿವೇಶನ, ಮನೆ, ಸಾಲಯೋಜನೆ, ಆಶ್ರಮಶಾಲೆಗಳು, ಚಿಕ್ಕ ಜಮೀನು ಹಿಡುವಳಿದಾರರಿಗೆ ಉಚಿತ ಕೊಳವೆ ಭಾವಿಗಳು ದೊರೆಯುವಂತೆ ಹತ್ತು ಹಲವಾರು ಆದೇಶಗಳನ್ನು ಅಲೆಮಾರಿ ಸಮುದಾಯದವರಿಗೆ ದೊರೆಯುವಂತೆ ಸರ್ಕಾರದೊಂದಿಗೆ ಪ್ರತಿಕ್ರಿಯಿ ಸುತಿದ್ದಾರೆ. ತಾಲ್ಲೂಕು, ಜಿಲ್ಲಾ ಮಟ್ಟದಲ್ಲಿ ಸಂಘಟನೆಗಳು ಪ್ರಾರಂಭವಾಗಿವೆ. ಚಂದ್ರಶೇಖರ ರೊಡ್ಡನವರ ಅವರು ಕಾನೂನು ಸಲಹೆಗಾರರಾಗಿ, ಸಮುದಾಯದ ನಿವೃತ್ತ ಉಪಾಧ್ಯಾಯ ರಾದ ರಾಜ್ಯ ಮತ್ತು ರಾಷ್ಟ್ರಪ್ರಶಸ್ತಿ ಪುರುಷ್ಕೃತರಾದ ಮಲ್ಲಿಕಾರ್ಜುನ ಹುಲಗಣ್ಣನವರ ಸಮುದಾಯದ ಸಂಘಟಕರಾಗಿ, ಬಸವಭೃಂಗೇಶ್ವರ ಸ್ವಾಮಿಗಳು ಧರ್ಮದರ್ಶಿ ಗಳಾಗಿರುವರು. ಇವರ ಮಾರ್ಗದರ್ಶನದಲ್ಲಿ ಸಮುದಾಯದವರಿಗೆ ಸಾಮಾಜಿಕ ಬದಲಾವಣೆಗಳು ಕೂಡ ನಡೆಯಹತ್ತಿವೆ. ಪೂಜ್ಯರು ತಿಪಟೂರು ಹತ್ತಿರ ಕೋಡಿಹಳ್ಳಿಯಲ್ಲಿ ಮಠ ಕಟ್ಟುವ ಕಾಯಕದಲ್ಲಿ ತೊಡಗಿದ್ದಾರೆ.

ರಾಜ್ಯದಲ್ಲಿ ಪ್ರಥಮತಃ ಸಮುದಾಯದ ಒಂದು ವಿದ್ಯಾರ್ಥಿನಿಲಯವನ್ನು ದಾವಣಗೆರೆಯಲ್ಲಿ ನಗರಸಭೆಯವರು ನೀಡಿದ ನಿವೇಶನದಲ್ಲಿ ಕಟ್ಟಡ ಪ್ರಾರಂಭವಾಗಿ ಒಂದು ಭಾಗ ಮುಗಿದಿದೆ. ಇನ್ನೂ ಮುಕ್ಕಾಲು ಭಾಗ ಕಟ್ಟಡ ರಚನೆಯಾಗಬೇಕಿದೆ. ಈ ವಿದ್ಯಾರ್ಥಿ ನಿಲಯಕ್ಕೆ ಅಧ್ಯಕ್ಷರಾಗಿ ಡಾ ಚನ್ನಮಲ್ಲಯ್ಯನವರಿದ್ದಾರೆ. ಇವರಿಂದಲೇ ಇವರ ದೇಣಿಗೆಯ ಮುಖಾಂತರ ಪ್ರಾರಂಭಿಕ ಕಟ್ಟಡ ಶುರುವಾಗಿ ಎಚ್ ರಾಮಪ್ಪ ನಿವೃತ್ತ ಕೆ ಇ ಬಿ ಇಂಜನೀಯರ್, ಹೊಸಹಳ್ಳಿಯ ಡಾ ಮಲ್ಲಪ್ಪನವರು ಮತ್ತು ಇವರ ಸಹೋದರರಾದ ಸುರೇಶ, ಅಶೋಕರವರು ರಾಜ್ಯಮಟ್ಟದ ಸಮುದಾಯದ ಸಂಘಟಕರಾದ ರಾಜ್ಯ ಹೆಳವ ಸಮಾಜದ ಅಧ್ಯಕ್ಷರಾಗಿ ಸಹಾಯಹಸ್ತ ಚಾಚಿದ ಈ ಕೃಷ್ಣಪ್ಪನವರು ಸಮಾಜದ ಹಿರಿಯ ನ್ಯಾಯವಾದಿಗಳಾದ ಎಂ ಎಸ್ ಹೆಳವರ್, ಶ್ರೀಮತಿ ಬಸಮ್ಮ ಹೆಳವರ್ ಅವರ ಮಕ್ಕಳು ಡಾ ಶಶಿಕಾಂತ, ಡಾ ಶ್ರೀಕಾಂತ ಮತ್ತು ಸಹೋದರರು, ಅಶೋಕ ಗಂಜಾಳ ವಿಜಾಪುರ ಅವರು, ಚಳ್ಳಕೆರೆ ಜಿ ಗೋವಿಂದಪ್ಪ, ಕೈದಾಳೆಯ ಸಿ ಎಂ ತಿಪ್ಪಣ್ಣ, ದಿವಂಗತ ಸಿ ಎಂ ಚನ್ನಪ್ಪ, ಮಲ್ಲಿಗೆರೆ ಎಚ್ ಎಸ್ ಫಕ್ಕೀರಪ್ಪ ಅವರು ಸಲ್ಲಿಸಿದ ದೇಣಿಗೆಯಿಂದ ವಿದ್ಯಾರ್ಥಿನಿಲಯದ ಕಾರ್ಯ ನಡೆದಿದೆ. ತಮಗೆ ಸಾಧ್ಯವಾದಷ್ಟು ವಂತಿಗೆಯನ್ನು ಸಮಾಜದವರೂ ನೀಡಿದ್ದಾರೆ. ಇದರ ಸಂಘಟನೆಗೆ ಹುಲಗಣ್ಣವರ ಸಿ ಎಂ ಚಾಮರಾಜ, ಕೋಟೆ ಓಂಕಾರಪ್ಪ, ವಾಯ್ ನಿಂಗಪ್ಪ ಮುಂತಾದವರ ಪರಿಶ್ರಮವೂ ಇದೆ.

ಲೋಕಸಭಾ ಸದಸ್ಯರು, ರಾಜ್ಯಸಭಾ ಸದಸ್ಯರು ಹಾಗೂ ವಿಧಾನಸಭೆ, ವಿಧಾನಪರಿಷತ್ ಸದಸ್ಯರ ಅನುದಾನದಲ್ಲಿ ವಿದ್ಯಾರ್ಥಿನಿಲಯದ ಕಟ್ಟಡಕ್ಕೆ ಮನವಿ ನೀಡಿದ್ದು ಅನುದಾನ ಬಿಡುಗಡೆ ನಿರೀಕ್ಷಿಸುತ್ತಿರುವುದಾಗಿದೆ. ಅಂತೂ ಇದೊಂದು ಒಳ್ಳೆಯ ಬೆಳವಣಿಗೆ.

**ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆ**

ಹೆಳವರು ಈಗ ಬಹಳ ಇಕ್ಕಟ್ಟಿನ ಪರಿಸ್ಥಿತಿಯಲ್ಲಿದ್ದಾರೆ. ವಂಶಾವಳಿ ಹೇಳಿ ಭಿಕ್ಷಾಟನೆ ಮಾಡಲು ಹೋದರೆ ಮೊದಲಿನಂತೆ ಭಿಕ್ಷೆಯನ್ನು ನೀಡುವುದಿಲ್ಲ. ಕೀಳಾಗಿ ಪರಿಗಣಿಸಲಾಗುತ್ತಿದೆ. ಸರ್ಕಾರ ಭಿಕ್ಷಾಟನೆ ನಿರ್ಮೂಲನೆ ಕಾನೂನು ತಂದಿದ್ದರಿಂದ ಭಿಕ್ಷಾಟನೆಯು ಶಿಕ್ಷಾರ್ಹ ಅಪರಾಧವಾಗಿದೆ. ಹೀಗಾಗಿ ಎಲ್ಲರೂ ಶಿಕ್ಷೆಗೆ ಒಳಪಡುವಂತಾಗಿದೆ. ಸಮುದಾಯದ ಸಾಮಾಜಿಕ ಬದಲಾವಣೆ ಮತಾಂತರದಿಂದ ಆಗುವುದಿಲ್ಲ. ಹಿಂದೂ ಧರ್ಮದ ಈ ಸಮುದಾಯವನ್ನು ಸವರ್ಣೀಯರು ಮತ್ತು ಹಿಂದುಳಿದ ವರ್ಗಗಳ ಚಿಂತಕರು ಈ ಸಮುದಾಯದ ಮೂಲ ಸಂಸ್ಕೃತಿ ಮತ್ತು ಮನೆ ಮನಗಳ ಸಂಬಂಧ ಉಳಿಸಿಕೊಂಡು ಈ ಸಮುದಾಯವನ್ನು ಸಮಾಜದ ಮುಖ್ಯವಾಹಿನಿಗೆ ತರಬೇಕಾಗಿದೆ. ಅದಕ್ಕಾಗಿ ಯಾವ ಸ್ಥಳದಲ್ಲಿ ಈ ಸಮುದಾಯದವರಿಗೆ ಉದ್ಯೋಗ ಕೊಡಲು ಸಾಧ್ಯವೋ ಅದೇ ಸ್ಥಳದಲ್ಲಿ ಉಚಿತವಾಗಿ ನಿವೇಶನ ನೀಡಿ ವಿವಿಧ ಯೋಜನೆಗಳಲ್ಲಿ ಮನೆ ಕಟ್ಟಿಸಿಕೊಟ್ಟು ಮನೆಯ ಸಂಸ್ಕೃತಿಯನ್ನು ಕಲ್ಪಿಸಿಕೊಡಬೇಕು. ತರಬೇತಿ ನೀಡಿ ಉದ್ಯೋಗ ಅವಕಾಶಗಳನ್ನು ಕಲ್ಪಿಸಿಕೊಟ್ಟು ಬಹುಶಃ ಅಲೆಮಾರಿಗಳಾಗಿದ್ದರೂ ತಮ್ಮ

ತಮ್ಮ ಮನೆಯ ಬೀಗ ಹಾಕಿಕೊಳ್ಳುವ ಸಂಸ್ಕೃತಿಯನ್ನು ಬೆಳೆಸಿಕೊಳ್ಳುತ್ತಾರೆ. ಆರ್ಥಿಕ, ಸಾಮಾಜಿಕ ಅಭಿವೃದ್ಧಿಗಳ ಬದಲಾವಣೆಗಳೂ ಆಗುತ್ತವೆ.

ಸಮಾಜದ ಹಿಂದುಳಿದಿರುವಿಕೆಗೆ ಕಾರಣ ಒಂದೇ ಒಂದು ಅಲ್ಪತೃಪ್ತಿ ಮತ್ತು ನಾಗರಿಕ ಜೀವನದ ಬಗ್ಗೆ ನಿರಾಶಕ್ತಿ ಬಾಹ್ಯ ಪ್ರಪಂಚದ ಜನಜೀವನದ ಬಗ್ಗೆ ಚಿಂತನೆ ಇಲ್ಲ. ಅವರೂ ಬೇರೆಯವರಂತೆ ಬಾಳಬೇಕೆಂಬುದನ್ನು ತಿಳಿಸಿ ಕೊಡಬೇಕಾಗಿದೆ.

ಆರ್ಥಿಕವಾಗಿ ಸರ್ಕಾರದ ಬಡತನ ರೇಖೆಯವರಿಗಿಂತ ಕೆಳಗಿನವರು ಇವರು. ಗುಳೆ ಹೋಗಿ ಎಲ್ಲಿ ವಸತಿ ಹಾಕುವರೋ ಅದೇ ಅವರ ನೆಲೆ, ಅದೇ ಅವರ ಊರು, ಅವರ ಗುಡಾರ, ಅವರ ಮನೆ. ಇವರು ಅಲೆಮಾರಿಗಳಾಗಿ ಭಿಕ್ಷಾಟನೆಯನ್ನು ಮೂಲವೃತ್ತಿಯನ್ನಾಗಿಟ್ಟುಕೊಂಡಿದ್ದರಿಂದ ತಮ್ಮ ಮಕ್ಕಳನ್ನು ಚಕ್ಕಡಿ ಬಂಡಿ ಜೊತೆಗೆ ಕರೆದುಕೊಂಡು ಹೋಗುವುದರಿಂದ ಮಕ್ಕಳನ್ನು ಶಾಲೆಗೆ ಕಳಿಸಲು ಸಾಧ್ಯವಾಗುವುದಿಲ್ಲ. ಅದರಲ್ಲೂ ಮುಖ್ಯವಾಗಿ ಭಿಕ್ಷಾಟನೆಗೆ ಮಕ್ಕಳನ್ನು ಕರೆದುಕೊಂಡು ಹೋಗುವುದಕ್ಕೆ ಮುಖ್ಯ ಕಾರಣ ಮಕ್ಕಳನ್ನು ನೋಡಿಯಾದರೂ ಅನುಕಂಪ ಬಂದು ಸ್ವಲ್ಪ ಹೆಚ್ಚಾಗಿ ಭಿಕ್ಷೆ ಪಡೆಯಬಹುದು ಎಂಬ ದುರಾಶೆಯು ಕಾರಣವಾಗಿದೆ.

ಸಮಾಜ ಕಲ್ಯಾಣ ಇಲಾಖೆಯು ಈ ಸಮುದಾಯದವರ ಮಕ್ಕಳಿಗಾಗಿ ಆಶ್ರಮ ಶಾಲೆಗಳನ್ನು ಪ್ರಾರಂಭಿಸಿತು. ಅವು ಹಿಂದುಳಿದ ವರ್ಗಗಳ ಇಲಾಖೆಗೆ ವರ್ಗಾಯಿಸಲ್ಪಟ್ಟವು. ಅವು ಈಗ ಮುಚ್ಚುವ ಸ್ಥಿತಿಯಲ್ಲಿವೆ. ಆಶ್ರಮ ಶಾಲೆಗಳಲ್ಲಿ ೧ನೇ ತರಗತಿಯಿಂದ ೪ನೇ ತರಗತಿವರೆಗೆ ಓದಲು ವಾಸಿಸಲು ತಂದೆ ತಾಯಿಗಳಿಂದ ಬೇರ್ಪಡಿಸಿ ಆಶ್ರಮ ವಸತಿ ಶಾಲೆಯಲ್ಲಿಡುವುದು, ಮಕ್ಕಳಿಗೆ ತಂದೆ ತಾಯಿಗಳ ಪ್ರೀತಿಯನ್ನು ಲಭಿಸದಂತೆ ಮಾಡಲಾಗುತ್ತೆ. ಅದ್ದರಿಂದ ಇಂತಹ ಆಶ್ರಮಶಾಲೆಗಳನ್ನು ಮುಂದುವರಿಸುವುದು ಮತ್ತು ಪ್ರಾರಂಭಿಸುವುದು ಸರಿಯಲ್ಲವೆಂಬ ಕೆಲವು ಶಿಕ್ಷಣ ತಜ್ಞರ ಅಭಿಮತವಾಗಿದೆ. ಆದರೆ ಅಲೆಮಾರಿ ಸಮುದಾಯಗಳಿಗೆ ಶಿಕ್ಷಣ ಕೊಡಬೇಕಾದರೆ ಅಲೆಮಾರಿ ಸಮುದಾಯಗಳ ಮಕ್ಕಳ ಹತ್ತಿರ ಅವರ ತಂದೆ ತಾಯಿಗಳು ಹೋಗದಂತೆ ನೋಡಿ ಕೊಳ್ಳಬೇಕಾಗಿದೆ. ಹಾಗೆ ನೋಡಿದರೆ ಎಷ್ಟೋ ಶ್ರೀಮಂತರು ತಮ್ಮ ಚಿಕ್ಕ ಮಕ್ಕಳನ್ನು ಪ್ರತಿಷ್ಠಿತ ಇಂಗ್ಲೀಷ್ ಕಾನ್ವೆಂಟ್ ವಸತಿ ಶಾಲೆಯಲ್ಲಿ ತಿಂಗಳಿಗೆ ಹತ್ತಾರು ಸಾವಿರ ರೂಪಾಯಿ ಖರ್ಚುಮಾಡಿ ಓದಿಸುತ್ತಿದ್ದಾರೆ. ಆದರೆ ಅವರಂತೆ ಅಲೆಮಾರಿ ಸಮುದಾಯ ದವರು ಅನ್ನ, ಬಟ್ಟೆ, ಫೀಕೊಟ್ಟು ಓದಿಸಬೇಕೆಂದು ಹೇಳುವುದಾದರೆ "ಹನಮಂತದೇವರು ಹೊಟ್ಟೆ ಹಸಿದು ಪೂಜಾರಿ ಸಾವಗಿ ಉಂಡಂತೆ" ಆಗುತ್ತದೆ.

ಸರ್ಕಾರಿ ಶಾಲೆಗಳಲ್ಲಿ ಓದುವ ಮಕ್ಕಳಿಗೆ ಒಂದನೇ ತರಗತಿಯಿಂದ ಇಂಗ್ಲೀಷ್ ಕಲಿಸಬಾರದು ಎಂದು ತಮ್ಮ ಮಕ್ಕಳು ಮೊಮ್ಮಕ್ಕಳನ್ನು ಪ್ರತಿಷ್ಠಿತ ಕಾನ್ವೆಂಟ್ ಶಾಲೆಗಳಲ್ಲಿ ಓದಿಸುತ್ತಿರುವ ಮಹಾಮೇಧಾವಿಗಳು ತಕರಾರು ತೆಗೆದರು. ಅಲೆಮಾರಿ ಸಮುದಾಯದ ಮಕ್ಕಳಿಗೆ ಓದಿಸಬೇಕೆಂಬ ಭಾವನೆ, ಬುದ್ಧಿ ಇರುವುದಿಲ್ಲ. ಬುದ್ಧಿ ಇದ್ದರೂ ಮಕ್ಕಳನ್ನು ಶಾಲೆಗೆ ಕಳಿಸಬೇಕಾದರೆ ಒಂದು ಕಡೆ ನೆಲೆಯಾಗಿ ನಿಲ್ಲಬೇಕಾಗುತ್ತದೆ. ಒಂದು ಕಡೆ

ನೆಲೆಯಾಗಿ ನಿಂತು ಭಿಕ್ಷಾಟನೆ ಮಾಡುವುದು ಸಾಧ್ಯವಿಲ್ಲ. ಊರಿಂದೂರಿಗೆ ಅಲೆಯುವ ಈ ಸಮುದಾಯದವರಿಗೆ ತಿಳಿಹೇಳಿ ಆ ಮಕ್ಕಳನ್ನು ವಸತಿ ಶಾಲೆಗೆ ಕಳಿಸಲು ಇಂತಹ ಶಾಲೆಗಳನ್ನು ಪ್ರಾರಂಭಿಸಬೇಕು. ಆಗಾಗ ಬಂದು ಮಕ್ಕಳನ್ನು ನೋಡಿಕೊಂಡು ಹೋಗಲು ತಂದೆ ತಾಯಿ, ಪೋಷಕರಿಗೆ ಅವಕಾಶ ಮಾಡಿಕೊಟ್ಟರೆ ಸಾಕು.

ಸರ್ಕಾರದ ಹಿಂದುಳಿದ ವರ್ಗಗಳ ಇಲಾಖೆ ಈ ಬಗ್ಗೆ ಹೆಚ್ಚಿನ ಚಿಂತನೆ ಮಾಡಿದೆ. ಚಿಂತನೆ ಚಿಂತನೆಯಾಗಿ ಉಳಿಯದೆ ಕಾರ್ಯ ರೂಪಕ್ಕೆ ಬರಬೇಕಾಗಿದೆ. ಹೀಗಾದಾಗ ಈ ಸಮುದಾಯದವರಿಗೆ ಶಿಕ್ಷಣ ಕೊಡಲು ಸಾಧ್ಯ.

**ಶೈಕ್ಷಣಿಕ ಸ್ಥಿತಿಗತಿ**

ಹೆಳವರು ಮೂಲತಃ ಅಲೆಮಾರಿಗಳು, ನಿತ್ಯದ ಬದುಕೇ ಮುಖ್ಯವಾಗಿರುವ ಇವರಿಗೆ ಶಿಕ್ಷಣ ಅಷ್ಟೇನೂ ಮಹತ್ವದ್ದಾಗಿ ಕಂಡುಬರುತ್ತಿಲ್ಲ.

ಇತ್ತೀಚಿನ ದಿನಗಳಲ್ಲಿ ಪ್ರಜ್ಞಾವಂತರಾಗಿರುವ ಹೆಳವರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಲು ಹೆಚ್ಚು ಉತ್ಸಾಹ ತೋರುತ್ತಿರುವುದು ಆಶಾದಾಯಕ ವಿಚಾರವೆಂದೇ ಹೇಳಬಹುದು. "ನಾವಾದರೂ ಕಲಿಯಲಿಲ್ಲ ನಮ್ಮ ಮಕ್ಕಳಾದರೂ ಕಲಿಯಲಿ" ಎಂಬ ಭಾವನೆ ಇವರಲ್ಲಿ ಕಂಡುಬರುತ್ತಿದೆ. ಸಮೀಕ್ಷೆಗೆ ಒಳಪಟ್ಟವರಲ್ಲಿ ಸಾಕ್ಷರತೆಗೆ ಅರ್ಹವಾದವರು ೮೯.೮೩ರ ಪ್ರಮಾಣದಲ್ಲಿದ್ದಾರೆ. ಆದರೆ ಸಾಕ್ಷರರ ಪ್ರಮಾಣ೨೮.೦೭ರಷ್ಟು ಮಾತ್ರ ಕಂಡುಬರುತ್ತದೆ.

**ಕೋಷ್ಟಕ: ೧೦.೧ ಸಮೀಕ್ಷೆಗೊಳಪಟ್ಟ ಹೆಳವರ ಸಾಕ್ಷರತಾ ಪ್ರಮಾಣ (೨೦೦೭)**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಸಾಕ್ಷರತೆ ಹೊಂದಲು ಅರ್ಹವಾದವರು | ೫೦೩೭ | ೪೮೬೨ | ೯೮೯೯ |
| ಸಾಕ್ಷರತೆ ಹೊಂದಿದವರು | ೧೬೯೮ | ೧೦೮೧ | ೨೭೭೯ |
| ನಿರಕ್ಷರಿಗಳು | ೩೩೩೯ | ೩೭೮೧ | ೭೧೨೦ |

**ಶಿಕ್ಷಣದ ಸ್ಥಿತಿಗತಿ :** ಆದರೆ ಇತ್ತೀಚಿನ ದಶಕಗಳಲ್ಲಿ ಹೆಳವರು ಒಂದು ಕಡೆ ನೆಲೆ ನಿಲ್ಲುತ್ತಿದ್ದಾರೆ. ಇವರಲ್ಲಿಯೂ ಶಿಕ್ಷಣದ ಕುರಿತು ಅರಿವುಂಟಾಗುತ್ತಿದೆ. ಹೀಗಾಗಿ ಈಚೆಗೆ ವಿದ್ಯಾಭ್ಯಾಸದಲ್ಲಿ ತೊಡಗಿದವರ ಸಂಖ್ಯೆ ಈ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಸಾಕ್ಷರತೆ ಹೊಂದಿದ ಹೆಳವರಲ್ಲಿ ಮೆಟ್ರಿಕ್ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ೮೬.೯೩ಇದೆ. ಆದರೆ ಮೆಟ್ರಿಕ್ ನಂತರದ ಶಿಕ್ಷಣ ಪಡೆದವರ ಪ್ರಮಾಣ ೧೩.೦೭ಮಾತ್ರ ಇದೆ. ಅಂದರೆ ಉನ್ನತ ಶಿಕ್ಷಣಕ್ಕೆ ಹೋದಂತೆಲ್ಲ ಹೆಳವರಲ್ಲಿ ಓದುವವರ ಪ್ರಮಾಣ ಕಡಿಮೆಯಾಗಿದೆ. ಮಾಧ್ಯಮಿಕ, ಪ್ರೌಢ ಶಿಕ್ಷಣ ಹೊಂದಿದವರಿಗಿಂತ ಪ್ರಾಥಮಿಕ ಶಿಕ್ಷಣ ಹೊಂದಿದ ಮಕ್ಕಳು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ನಾಲ್ಕು ಐದನೇ ತರಗತಿಗೆ ಬರುವಷ್ಟರಲ್ಲಿ ಮಕ್ಕಳನ್ನು ನಾನಾ ಕಾರಣಗಳಿಗಾಗಿ ಶಾಲೆ ಬಿಡಿಸುವುದರಿಂದ ಮುಂದಿನ ವಿದ್ಯಾಭ್ಯಾಸವನ್ನು ಮಕ್ಕಳು ಪೂರೈಸಲು ಸಾಧ್ಯವಾಗುವುದಿಲ್ಲ.

ಕೋಷ್ಟಕ: ೧೦.೨ ಸಮೀಕ್ಷೆಗೊಳಪಟ್ಟ ಹೆಳವರ ಶೈಕ್ಷಣಿಕ ಸ್ಥಾನಮಾನ (೨೦೦೭)

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| | ಮೆಟ್ರಿಕ್‌ಪೂರ್ವ ಶಿಕ್ಷಣ | | | |
| ೦೧ | ಪ್ರಾಥಮಿಕ | ೪೬೭ | ೩೯೦ | ೮೫೭ |
| ೦೨ | ಮಾಧ್ಯಮಿಕ | ೪೧೬ | ೨೮೭ | ೭೦೩ |
| ೦೩ | ಪ್ರೌಢಶಾಲೆ | ೫೪೪ | ೩೧೨ | ೮೫೬ |
| | ಒಟ್ಟು | ೧೪೨೭ | ೯೮೯ | ೨೪೧೬ |
| | ಮೆಟ್ರಿಕ್ ನಂತರದ ಶಿಕ್ಷಣ | | | |
| | ಪಿಯುಸಿ | ೧೬೪ | ೭೨ | ೨೩೬ |
| | ಪದವಿ | ೫೧ | ೮ | ೫೯ |
| | ಡಿಪ್ಲೋಮಾ | ೯ | ೧ | ೧೦ |
| | ಸ್ನಾತಕೋತ್ತರ | ೬ | ೧ | ೭ |
| | ಇತರೆ | ೪೧ | ೧೦ | ೫೧ |
| | ಒಟ್ಟು | ೨೭೧ | ೯೨ | ೩೬೩ |

ಕರ್ನಾಟಕದಲ್ಲಿ ವಾಸಿಸುವ ಹೆಳವರಲ್ಲಿ ೦-೪ ರೊಳಗಿನ ವಯೋಮಾನದ ಮಕ್ಕಳು ಶೇ. ೧೦.೧೬ರಷ್ಟಿದ್ದಾರೆ. ಇವರನ್ನು ಹೊರತುಪಡಿಸಿ ಶಿಕ್ಷಣ ಪಡೆಯಲು ಯೋಗ್ಯರಾದವರು ಶೇ. ೮೯.೮೩ರಷ್ಟಿದ್ದಾರೆ. ಆದರೆ ಇವರಲ್ಲಿ ಸಾಕ್ಷರರಾದವರ ಪ್ರಮಾಣ ಕೇವಲ ಶೇ. ೨೮.೦೭(೨೦೦೭ರ ಸಮೀಕ್ಷೆ)ರಷ್ಟು ಮಾತ್ರವಾಗಿದೆ. ಇದರಲ್ಲಿ ಮೆಟ್ರೀಕ್ ಪೂರ್ವ ಸಾಕ್ಷರತೆಯ ಪ್ರಮಾಣ ಶೇ. ೮೬.೯೩ರಷ್ಟಾಗಿದ್ದು ಅದರಲ್ಲಿ ಪುರುಷರು ಶೇ. ೮೪.೦೪ ರಷ್ಟು ಮಹಿಳೆಯರು ಶೇ. ೯೧.೪೮ರಷ್ಟು ಕಂಡುಬಂದರೆ ಮೆಟ್ರೀಕ್ ನಂತರದ ಸಾಕ್ಷರತೆಯಲ್ಲಿ ಒಟ್ಟಾರೆ ಶೇ. ೧೩.೦೬ರಷ್ಟು ಮಾತ್ರವಾಗಿದ್ದು ಅದರಲ್ಲಿ ಪುರುಷರು ಶೇ. ೧೫.೯೫ರಷ್ಟು ಸ್ತ್ರೀಯರು ಶೇ. ೮.೫೧ರಷ್ಟು ಅಂಕಿಅಂಶಗಳಿಂದ ತಿಳಿದುಬರುತ್ತದೆ. ಇದರಿಂದ ಪುರುಷರ ಸಾಕ್ಷರತಾ ಪ್ರಮಾಣಕ್ಕಿಂತ ಮಹಿಳೆಯರ ಸಾಕ್ಷರತಾ ಪ್ರಮಾಣ ಈ ಸಮುದಾಯದಲ್ಲಿ ತುಂಬಾ ಕಡಿಮೆ ಇರುವುದು ಸಮೀಕ್ಷೆಯ ಮೂಲಕ ತಿಳಿದು ಬರುತ್ತದೆ. ಕರ್ನಾಟಕ ರಾಜ್ಯದ ಸರಾಸರಿ ಸಾಕ್ಷರರ ಪ್ರಮಾಣ ಶೇಕಡ ೬೭.೦೪ (೨೦೦೧ರ ಜನಗಣತಿ). ಹೆಳವರಲ್ಲಿ ಅನಕ್ಷರಸ್ಥರ ಪ್ರಮಾಣವು ೬೪.೬೧ರಷ್ಟಿರುವುದು.

ಕೋಷ್ಟಕ : ೧೦.೩ ಹೆಳವರ ಶೈಕ್ಷಣಿಕ ಅಂತರ

| ವಿವರ | ಸಾಕ್ಷರತೆ | ಅಂತರ |
|---|---|---|
| ಭಾರತ (೨೦೦೧) | ೬೪.೮೪ | ೩೬.೭೭ |
| ಕರ್ನಾಟಕ (೨೦೦೧) | ೬೬.೬೪ | ೩೮.೫೭ |
| ಕರ್ನಾಟಕ ಹೆಳವರು (೨೦೦೭ರ ಸಮೀಕ್ಷೆ) | ೨೮.೦೭ | -- |

ಭಾರತ ಮತ್ತು ಕರ್ನಾಟಕ ಸಾಕ್ಷರತೆಗೆ ಹೋಲಿಸಿದಲ್ಲಿ ಕರ್ನಾಟಕ ಹೆಳವರ ಸಾಕ್ಷರತೆಯು ಭಾರಿ ಅಂತರವನ್ನು ಹೊಂದಿರುವುದು (ಕೋಷ್ಟಕ:೧೦.೫). ಇದನ್ನು ಸರಿದೂಗಿಸಲು ಸಾಕ್ಷರತೆಗೆ ಸಂಬಂಧಿಸಿದಂತೆ ವಿಶೇಷ ಯೋಜನೆಗಳನ್ನು ರೂಪಿಸುವುದು ಅಗತ್ಯವಾಗಿದೆ.

ಆರ್ಥಿಕ ಅಭಿವೃದ್ಧಿಗೆ ಆಯಾ ಸಮುದಾಯದಲ್ಲಿಯೇ ಅಥವಾ ಅಲೆಮಾರಿ ಸಮುದಾಯಗಳು ಒಟ್ಟಿನಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಸಮುದಾಯದವರಿಗೆ ಕೇವಲ ವ್ಯವಸಹಾಯವನ್ನು ಅವಲಂಬಿಸದೆ ಅವರಿಗೆ ಸ್ವಯಂ ಉದ್ಯೋಗ ಮಾಡಿ ಕೊಳ್ಳಲು ಸಾಧ್ಯವಾಗುವಂತೆ ಮತ್ತು ಬೇರೆಡೆ ಕೆಲಸ ದೊರಕಿಸಲು ಅನುಕೂಲವಾಗುವಂತೆ ಹೊಲಿಗೆ, ಹೈನುಗಾರಿಕೆ ಮತ್ತು ಇತರ ಉದ್ಯೋಗಗಳನ್ನು ಪಡೆಯಲು ಗಣಕಯಂತ್ರಗಳ ಮುಖಾಂತರ ಕೋರ್ಸ್‌ಗಳನ್ನು ಪ್ರಾರಂಭಿಸಿ ಮಾಹೆಯಾನ ಅನುದಾನ ನೀಡಿ ತರಬೇತಿ ನೀಡಿದರೆ ಈ ಸಮುದಾಯದವರನ್ನು ಆರ್ಥಿಕವಾಗಿ ಮುಂದೆ ತಂದು ಸ್ವಾವಲಂಬಿ ಗಳನ್ನಾಗಿ ಮಾಡಬಹುದಾಗಿದೆ.

**ರಾಜಕೀಯ ಸ್ಥಿತಿಗತಿ**

ಹೆಳವರ ರಾಜಕೀಯ ಸ್ಥಿತಿ ಅಷ್ಟೇನು ತೃಪ್ತಿದಾಯಕವಾದುದಲ್ಲ. ಹೆಳವರಲ್ಲಿ ಗ್ರಾಮ ಪಂಚಾಯತಿ ಮಟ್ಟದಲ್ಲಿ ಬೆರಳೆಣಿಕೆಯಷ್ಟು ಜನರು ಮಾತ್ರ ಪ್ರವೇಶ ಪಡೆದಿದ್ದಾರೆ. ಆದರಾಚಗೆ ನಗರಸಭೆ, ತಾಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ ಹಾಗೂ ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಇವರು ರಾಜಕೀಯವಾಗಿ ಪ್ರವೇಶಪಡೆಯಲು ಇಂದಿಗೂ ಸಾಧ್ಯವಾಗುತ್ತಿಲ್ಲ. ಪ್ರಾಯಶಃ ಹೆಳವರು ಅಲ್ಪಸಂಖ್ಯಾತರಾಗಿರುವುದೇ ಇದಕ್ಕೆ ಕಾರಣ ಇರಬಹುದು. ರಾಜಕೀಯವಾಗಿ ಇವರಿಗೆ ಯಾವುದೇ ಅಧಿಕಾರ ಸಿಗದೆ ಇರುವುದರಿಂದ ಇವರು ಸಾಮಾಜಿಕವಾಗಿ ಪ್ರಗತಿ ಹೊಂದಲು ಸಾಧ್ಯವಾಗುತ್ತಿಲ್ಲವೆನೊ. ಇಂದಿಗೂ ಈ ಸಮುದಾಯದ ಎಷ್ಟೋ ಜನ ಮತದಾರರ ಪಟ್ಟಿಯಿಂದಲೆ ಹೊರಗೆ ಉಳಿದಿದ್ದಾರೆ. ತಮಗಿಂತಲೂ ನಿಕೃಷ್ಟವಾಗಿರುವ ಸಮುದಾಯಗಳನ್ನು ನೋಡಿ ಇವರು ತಮಗೆ ಇಷ್ಟಾದರೂ ದೊರೆತಿದೆಯಲ್ಲ ಎಂದು ತೃಪ್ತಿ ಹೊಂದಬೇಕಷ್ಟೆ.

ಪ್ರಜಾಪ್ರಭುತ್ವದಲ್ಲಿ ರಾಜಕೀಯವಾಗಿ ತೀರಾ ಕನಿಷ್ಟ ಜನಸಂಖ್ಯೆಯುಳ್ಳ ಜಾತಿಗಳವರಿಗೆ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದು ಬರುವುದು ಕನಸಿನ ಮಾತು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ರಾಜಕೀಯ ಮೀಸಲಾತಿ ಇರುವಂತೆ ಅಲೆಮಾರಿ ಸಮುದಾಯ ಗಳಿಗೆ ಪ್ರತ್ಯೇಕ ರಾಜಕೀಯ ಮೀಸಲಾತಿಯನ್ನು ಕಲ್ಪಿಸುವುದು ಅಗತ್ಯ.

**ಕೋಷ್ಟಕ: ೧೦.೪ ಸಮೀಕ್ಷೆಗೊಳಪಟ್ಟ ಹೆಳವರ ಮತದಾನದ ಸೌಲಭ್ಯ**

| ವಿವರ | ಪುರುಷ | ಮಹಿಳೆ | ಒಟ್ಟು |
|---|---|---|---|
| ಮತದಾನ ಮಾಡಲು ಅರ್ಹರ ಗುಂಪು | ೩೪೪೧ | ೩೪೦೯ | ೬೮೫೦ |
| ಮತದಾರರ ಗುಂಪು | ೨೪೧೩ | ೨೨೯೪ | ೪೭೦೭ |
| ಮತದಾರ ಪಟ್ಟಿಗೆ ಸೇರದ ಗುಂಪು | ೧೦೨೮ | ೧೧೧೫ | ೨೧೪೩ |

ಹೆಳವರಲ್ಲಿ ಇಂದಿಗೂ ಮತದಾರರ ಪಟ್ಟಿಗೆ ಸೇರದ ಎಷ್ಟೋ ಜನ ಕಂಡು ಬರುತ್ತಾರೆ. ಸಮೀಕ್ಷೆ ಮಾಡಿದವರಲ್ಲಿ ಮತದಾರರ ಪಟ್ಟಿಯಲ್ಲಿರುವವರ ಪ್ರಮಾಣ ಶೇ. ೬೮.೭೧ಇದೆ. ಮತದಾರರ ಪಟ್ಟಿಯಲ್ಲಿಲ್ಲದವರ ಪ್ರಮಾಣ ಶೇ. ೩೨.೨೯ರಷ್ಟಿದೆ.

ಅಲೆಮಾರಿ ಹೆಳವರನ್ನು ಪರಿಶಿಷ್ಟ ವರ್ಗದಲ್ಲಿ ಅಥವಾ ಪ್ರತ್ಯೇಕ ಅಲೆಮಾರಿ ಪಟ್ಟಿಯಲ್ಲಿ ಸೇರಿಸಲು ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಮುಂದಾಗಬೇಕು. ಮೀಸಲಾತಿಯ ಲಾಭವನ್ನು ಸಮರ್ಪಕವಾಗಿ ಮುಟ್ಟಿಸುವಂತಾಗಬೇಕು.

ಕೇಂದ್ರ ಸರ್ಕಾರ ಅಲೆಮಾರಿ ಸಮುದಾಯಗಳಿಗೆ ಮಹಾರಾಷ್ಟ್ರ ಮೂಲದ ಪ್ರಸಿದ್ಧ ಸಾಮಾಜಿಕ ಕಾರ್ಯಕರ್ತ ಬಾಲಕೃಷ್ಣ ರೇಣುಕೆ ಇವರ ಅಧ್ಯಕ್ಷತೆಯಲ್ಲಿ ಆಯೋಗ ರಚಿಸಿದೆ. ಅದೇ ರೀತಿಯಲ್ಲಿ ಕರ್ನಾಟಕ ಸರ್ಕಾರ ಅಲೆಮಾರಿ ಸಮುದಾಯಗಳಿಗೆ ಒಂದು ಆಯೋಗವನ್ನು ನಿಯಮಿಸುವ ಕಾರ್ಯವಾಗಬೇಕು.

ಅಲೆಮಾರಿ ಸಮುದಾಯಗಳ ಸರ್ವತೋಮುಖ ಅಭಿವೃದ್ಧಿಗೆ ಪಲಾನುಭವಿಗಳನ್ನು ಗುರುತಿಸಿ, ಮತದಾರರಯಾದಿಗೆ ಸೇರಿಸಿ, ಬಿಪಿಎಲ್ ಪಡಿತರ ಚೀಟಿ ನೀಡಿ, ನಿವೇಶನ ಮನೆ ಮಂಜೂರು ಮಾಡಿ ಔದ್ಯೋಗಿಕ ತರಬೇತಿ ನೀಡಿ ಉದ್ಯೋಗಕ್ಕೆ ದಾರಿ ಮಾಡಿ ಕೊಡಬೇಕು.

### ವಿಧವಾವೇತನ ಸೌಲಭ್ಯ

ವಿಧುರರು ೬೮ ಮತ್ತು ವಿಧವರೆಯರು ೪೨೫ ಜನರಿದ್ದಾರೆ. ಆದರೆ ಕೇವಲ ೯೧ ಜನ ವಿಧವೆಯರು ಮಾತ್ರ ವಿಧವಾವೇತನ ಪಡೆಯಲು ಸಾಧ್ಯವಾಗಿದೆ.

**ಕೋಷ್ಟಕ: ೧೦.೫ ಸಮೀಕ್ಷೆಗೊಳಪಟ್ಟ ಹೆಳವರ ವಿಧವಾವೇತನ ಸೌಲಭ್ಯ**

| ಸಂ. | ವಿವರ | ಸಂಖ್ಯೆ |
|---|---|---|
| ೦೧ | ವಿಧವೆಯರು | ೪೨೫ |
| ೦೨ | ವಿಧವಾ ವೇತನ ಪಡೆಯುವರು | ೯೧ |

ಅನಕ್ಷರಸ್ಥ ಮಹಿಳೆಯರು ತಿಳುವಳಿಕೆಯ ಕೊರತೆಯಿಂದಾಗಿ ವಿಧವಾ ವೇತನ ಪಡೆಯಲು ಸೋತಿದ್ದಾರೆ.

### ಫಲಿತಗಳು

ಹೆಳವ ಸಮುದಾಯವು ಕಾಲಿಲ್ಲದ ಕುಂಟನಿಂದ ಒಕ್ಕಾಲು ಭೃಂಗೇಶ್ವರನಿಂದ ಹುಟ್ಟಿ ಆತನಿಂದ ಸಂತತಿ ಬೆಳೆದು ಹೆಳವ ಸಮುದಾಯ ನಿರ್ಮಾಣವಾಯಿತು. ಬಸವಣ್ಣನವರ ಕಾಲದಲ್ಲಿ ಈತನಿಗೂ ಕಾಯಕ ನೀಡಿ, ಗಂಟೆ ಎತ್ತು ಕೊಟ್ಟು ಒಕ್ಕಲು ಮನೆಗಳ ವಂಶಾವಳಿ ಬರೆದಿಟ್ಟುಕೊಳ್ಳುತ್ತಾ ಭಿಕ್ಷಾಟನೆ ಮಾಡಿ ಜೀವಿಸಲು ಅನುಕೂಲ ಮಾಡಿ ಕೊಟ್ಟಿರುವದಾಗಿದೆ.

ಹೆಳವನ ಹರಕೆಯಿಂದ ಒಕ್ಕಲು ಮನೆತನದವರು ಸಂತೋಷ ಪಡುತ್ತಾ ತುಂಬಾ

ಪ್ರೀತಿ ವಿಶ್ವಾಸಗಳಿಂದ ನಡೆದುಕೊಂಡಿತ್ತು. ಅವರಿಂದ ದೊರೆತ ದವಸಧಾನ್ಯಗಳಿಂದ ಜೀವನ ನಡೆಸುತ್ತಾ ಸುಖ ಸಂತೋಷದಲ್ಲಿದ್ದ ಈ ಸಮುದಾಯವು ಸ್ಥಿರಾಸ್ಥಿ ಗೋಜಿಗೆ ಹೋಗಲಿಲ್ಲ. ಬದಲಾವಣೆ ಈ ಕಾಲದಲ್ಲಿ ಹಿಂದಿನ ನಡುವಳಿಕೆ, ಪ್ರೀತಿ ವಿಶ್ವಾಸಗಳು ಉಳಿದಿಲ್ಲ. ಜೀವನಕ್ಕೆ ತೊಂದರೆಯಾಗಿ ಅಲೆಮಾರಿಳಾಗಿ ತಿರುಗುತ್ತಾ ತಮಗೆ ಕಾಣಸಿಗುವ ಗ್ರಾಮಗಳಲ್ಲಿ ನೆಲೆಯಾಗಿ ನಿಂತಿದ್ದಾರೆ.

ಜೀವನದ ಅಂಕು ಡೊಂಕುಗಳನ್ನು ಕಾಣುತ್ತಾ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಹಿಂದುಳಿದು ಸರ್ಕಾರದ ಯಾವ ಸೌಲಭ್ಯಗಳು ದೊರೆಯದೆ ಕಂಗಾಲಾದ ಈ ಸಮುದಾಯದ ಸ್ಥಿತಿ ತೀರಾ ಚಿಂತಾಜನಕವಾಗಿದೆ.

ಸಮುದಾಯವು ಸಮಾಜದ ಸಂಘಟನೆಗಳಿಂದ ಜಾಗ್ರತೆಗೊಳಿಸುತ್ತಿರುವುದು ಕಂಡುಬರುತ್ತಿದೆ. ಅನೇಕ ಸಂದರ್ಭಗಳಲ್ಲೂ ಸೌಲಭ್ಯಕ್ಕಾಗಿ ಮನವಿ ಅರ್ಪಿಸಿದ್ದೂ ವಿಶೇಷತೆಯಾಗಿದೆ. ರಾಜಕೀಯ ಹಿನ್ನೆಲೆ ಇರದ್ದರಿಂದ ಅಭಿವೃದ್ಧಿ ಕುಂಠಿತವಾಗಿದೆ. ಸ್ಥಿರಾಸ್ತಿ ಹೊಂದಿಲ್ಲ. ಭಿಕ್ಷಾಟನೆಯಿಂದ ಹೊಟ್ಟೆ ತುಂಬಿಕೊಳ್ಳುವುದೇ ಮುಖ್ಯವಾಗಿದೆ.

ಈ ಸಮುದಾಯವು ದೇವದಾಸಿ ಪದ್ಧತಿಯಲ್ಲಿ ನಂಬಿಕೆಯಿಟ್ಟು ದೇವರಿಗೆ ಮೀಸಲಾದ ಹೆಣ್ಣು ಮಕ್ಕಳು ಒಬ್ಬನನ್ನೇವರಿಸಿಕೊಂಡು ಮುತ್ತೈದೆಯಾಗಿ ಸಮಾಜದಲ್ಲಿ ಗೌರವ ಇಟ್ಟುಕೊಂಡು ಬಾಳಿದ್ದು ಇದೆ. ಈಗಿನ ಕಾಲದಲ್ಲಿ ಕೆಲವು ಕುಟುಂಬದವರು ಯಲ್ಲಮ್ಮನ ಹೆಸರಿನ ಮೇಲೆ ಪಡ್ಲಿಗೆ ಹೊರಿಸಿ ದೇವರು ಹೊತ್ತವರೆಂದು ಭಕ್ತಿಯಿಂದ ಕಾಣುತ್ತಾರೆ. ಮಂಗಳವಾರ, ಶುಕ್ರವಾರ, ಹುಣ್ಣಿಮೆ ದಿನ ಐದು ಮನೆ ಭಿಕ್ಷೆ ಮಾಡಿ ಭಂಡಾರ ನೀಡಿ ಹರಸಿ ಬರುತ್ತಾರೆ. ಇದು ಈಗಲೂ ನಡೆಯುತ್ತಿದೆ. ಇವರನ್ನು ಎಲ್ಲರೂ ನಮಸ್ಕರಿಸುತ್ತಾರೆ.

ಕಸುಬು ಒಕ್ಕಲು ಮನೆಗೆ ಭಿಕ್ಷಾಟನೆಗೆ ಹೋಗುವುದು, ತಾವು ವಾಸಿಸುವ ಸ್ಥಳಗಳಲ್ಲಿ ರೈತಕಾರ್ಮಿಕರಾಗಿ ಕೆಲಸ ಮಾಡುವುದು, ಕಾಫಿ ತೋಟಗಳಲ್ಲಿ ದುಡಿಯುವುದು, ಇವರ ಕಸುಬುಗಳಾಗಿವೆ. ಮತ್ತೊಂದು ಕಸುಬು ಮಾಡಲು ಆರ್ಥಿಕತೆಯಿಂದ ದುರ್ಬಲರು.

ದೈವ ಸಂಬಂಧವಾಗಿ ತಾವಿರುವ ಗ್ರಾಮಗಳಲ್ಲಿಯ ಗ್ರಾಮ ದೇವತೆ ಪೂಜಿಸುವುದು ಜಾತ್ರೆಯಲ್ಲಿ ಭಾಗವಹಿಸುವುದು. ಜಾತ್ರೆ ಸಂದರ್ಭದಲ್ಲಿ ದೇವತೆಗೆ ಕುರಿ ಕೋಳಿ ಬಲಿ ಕೊಡುವುದು ಈಗಲೂ ಮುಂದುವರಿಸಿಕೊಂಡು ಬಂದಿದ್ದಾರೆ.

ಈ ಸಮುದಾಯವು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗಿಂತಲೂ ಕಡಿಮೆ ಸ್ಥಾನದಲ್ಲಿರುವುದುರಿಂದ ಇವರನ್ನು ಕೀಳು ಜಾತಿ ಎಂದು ಕಡೆಗಣಿಸಿ ಯಾವುದೇ ಸೌಲಭ್ಯ ದೊರೆಯದಂತೆ ಸ್ವಾತಂತ್ರ್ಯ ದೊರೆತು ೬೦ ವರ್ಷ ಕಳೆದರೂ ಅಭಿವೃದ್ಧಿ ಆಗದೆ ಇರುವುದು ಚಿಂತೆಗೀಡು ಮಾಡಿದೆ.

ಇತಿಹಾಸ ಚರಿತ್ರೆಯಲ್ಲಿ ಉಳಿದ ಈ ಸಮುದಾಯವು ವಂಶಾವಳಿಗಳಿಂದ ಮನೆತನದ ಇತಿಹಾಸ ಸಾರುವ ಸಂಗ್ರಹದಿಂದ ಇಂದಿಗೂ ದಾಖಲೆಗಳಲ್ಲಿ ಕಾಣಬಹುದಾಗಿದೆ.

ಕನಿಷ್ಠ ಜೀವನ ಸಾಗಿಸುವ, ಸೂರುಗಳಿಲ್ಲದೆ, ಕೃಷಿಗೆ ಜಮೀನು ಹೊಂದದೆ ಬದುಕುತ್ತಿರುವ ಇವರಿಗೆ ಸೌಲಭ್ಯ ಕೊಡಿಸಲು ಸರ್ಕಾರವೇ ಮುಂದಾಗಬೇಕು.

**ಮೀಸಲಾತಿ ಬಳಕೆ :** ಸರ್ಕಾರಗಳು ಸಂವಿಧಾನದ ೧೫(೪)ರಲ್ಲಿ ವೃತ್ತಿ ಶಿಕ್ಷಣದಲ್ಲಿ ಮೀಸಲಾತಿ ಕಲಂ ೧೬(೪)ರಲ್ಲಿ ವೃತ್ತಿ ಶಿಕ್ಷಣ, ನೌಕರಿಯಲ್ಲಿ ಮೀಸಲಾತಿ ನೀಡಿದ್ದರೂ ಸಹ ಈ ಸಮುದಾಯದವರು ಯಾವುದೇ ರೀತಿಯ ಲಾಭ ಪಡೆಯಲು ಸಾಧ್ಯವಾಗಿಲ್ಲ. ಸರ್ಕಾರದವರು ವಿವಿಧ ಯೋಜನೆಗಳನ್ನು ಕೊಡುತ್ತಿರುವ ನಿವೇಶನಗಳು, ಮನೆಗಳನ್ನು ಸಮರ್ಪಕವಾಗಿ ಪಡೆಯಲು ಸಹ ಸಾಧ್ಯವಾಗಿಲ್ಲ. ಖಾಸಗಿ ಸಂಸ್ಥೆಗಳಲ್ಲಿಯ ಮೀಸಲಾತಿಯಲ್ಲಿಯೂ ಲಾಭ ಪಡೆಯಲಾಗಲಿಲ್ಲ.

ಪ್ರವರ್ಗ ೧ ರಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳಿಗಿಂತ ತೀರಾ ಕನಿಷ್ಟ ಜಾತಿಯ ಅಲೆಮಾರಿ ಸಮುದಾಯಗಳ ಜೊತೆಗೆ ಬಲಿಷ್ಟ ಜಾತಿಗಳನ್ನು ಸೇರಿಸಿದ್ದರಿಂದ ಅಲೆಮಾರಿ ಸಮುದಾಯಗಳು ಮೀಸಲಾತಿ ಸೌಲಭ್ಯ ಪಡೆಯಲು ಸಾಧ್ಯವಾಗಿಲ್ಲ. ಸರ್ಕಾರ ಮೊದಲು ಈ ಅಲೆಮಾರಿ ಸಮುದಾಯಗಳನ್ನು ಪ್ರವರ್ಗ ೧ ರಿಂದ ಬೇರ್ಪಡಿಸ ಬೇಕು ಮತ್ತು ಸಾಧ್ಯವಾದ ಮಟ್ಟಿಗೆ ಎಲ್ಲ ಜಾತಿಗಳಿಗೂ ಪ್ರಾತಿನಿಧ್ಯ ಕೊಡುವ ಕಾನೂನು ರಚಿತವಾಗಬೇಕು.

**ಸಲಹೆಗಳು**

೧. ಸಮುದಾಯದ ಸಮೀಕ್ಷೆಯನ್ನು ಪರಿಗಣಿಸಿ ಈ ಸಮುದಾಯದವರು ಎಲ್ಲೆಲ್ಲಿ ವಾಸವಾಗಿರುವರೋ ಅಲ್ಲಲ್ಲಿ ಉದ್ಯೋಗ ಒದಗಿಸಲು ಮೊದಲ ಪ್ರಯತ್ನವಾಗಬೇಕು. ವ್ಯವಸಾಯ, ಹೈನುಗಾರಿಕೆ, ಹೊಲಿಗೆ ತರಬೇತಿ, ಚಾಪೆ ಹೆಣೆಯುವುದು, ಹಂದಿ, ಕುರಿ, ಕೋಳಿ ಸಾಕಣಿಕೆ ಮತ್ತು ಇತರ ಕಸುಬುಗಳನ್ನು ಕೈಗೊಳ್ಳಲು ತರಬೇತಿ ನೀಡ ಬೇಕು. ಈ ತರಬೇತಿ ಕೇಂದ್ರಗಳಿಗಾಗಿ ವರ್ಕ್ ಸೆಡ್‌ಗಳನ್ನು ನಿರ್ಮಿಸಬೇಕು. ತರಬೇತಿಯ ನಂತರ ಸ್ವಯಂ ಉದ್ಯೋಗ ಪ್ರಾರಂಭಿಸಲು ಆರ್ಥಿಕ ನೆರವು ನೀಡಬೇಕು. ಉಳಿದ ಸಮಾಜದ ಮಹಿಳೆಯರಂತೆ ಈ ಸಮುದಾಯದ ಮಹಿಳೆಯರೂ ಕೂಡ ಸ್ತ್ರೀ ಸ್ವಸಹಾಯ ಗುಂಪುಗಳನ್ನು ರಚಿಸಿ ಆರ್ಥಿಕ ನೆರವು ನೀಡಬೇಕು. ಮತ್ತು ಅಲ್ಲಿಯೇ ಖಾಯಂ ಆಗಿ ನೆಲೆಸಲು ಎಲ್ಲರಿಗೂ ಉಚಿತವಾಗಿ ನಿವೇಶನ ನೀಡಿ ಮನೆಗಳನ್ನು ಕಟ್ಟಿಸಿಕೊಡಬೇಕು. ನೀರು, ವಿದ್ಯುತ್ ದೀಪ, ಸೌಕರ್ಯ ಒದಗಿಸಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳಿಗೆ ಕೊಡುತ್ತಿರುವ ವಿಶೇಷ ಆರ್ಥಿಕ ಯೋಜನೆಗಳನ್ನು ಈ ಸಮುದಾಯಗಳಿಗೆ ವಿಸ್ತರಿಸಬೇಕು.

೨. ಶೈಕ್ಷಣಿಕ ಅಭಿವೃದ್ಧಿಗಾಗಿ ಸಮುದಾಯದ ಹಿರಿಯರಿಗೆ ಸಾಕ್ಷರತಾ ಕಲಿಕಾ ಕೇಂದ್ರಗಳನ್ನು ಸ್ಥಾಪಿಸಬೇಕು. ಓದುವ ಬರೆಯುವ ಅಭ್ಯಾಸ ಕಲಿಸಲು ಗ್ರಂಥಾಲಯ ಗಳನ್ನು ಸ್ಥಾಪಿಸಬೇಕು. ಸಮುದಾಯದ ಸಂಘಟನೆಗಾಗಿ ಮತ್ತು ತಮ್ಮ ಪ್ರಾಚೀನ, ಕಲೆ, ಸಾಹಿತ್ಯ ಸಂಸ್ಕೃತಿ ಉಳಿಸಿಕೊಳ್ಳುವುದಕ್ಕಾಗಿ ಸಮುದಾಯ ಭವನಗಳನ್ನು ನಿರ್ಮಿಸ ಬೇಕು. ಅವರನ್ನು ಮುಖ್ಯವಾಹಿನಿಗೆ ತರುವ ಎಲ್ಲಾ ಪ್ರಯತ್ನಗಳೂ ನಡೆಯಬೇಕು.

ಅವರ ಸ್ವಉದ್ಯೋಗದಿಂದ ತಯಾರಿಸಿದ ವಸ್ತುಗಳನ್ನು ಮಾರಾಟಕ್ಕಾಗಿ ಸಹಾಯಧನ ನೀಡಿ ಮಾರಾಟವಾಗುವಂತೆ ನೋಡಿಕೊಳ್ಳಬೇಕು. ಹಾಗೆಯೆ ಅದರಲ್ಲಿ ಈಗ ಚಾಲಕ ತರಬೇತಿ ಕೇಂದ್ರ ತೆರೆದು ನಂತರ ಅವರಿಗೆ ಬಾಡಿಗೆಗೆ ದುಡಿಯುವಂತೆ ಅನುಕೂಲ ಮಾಡಿಕೊಡಲು ಅಟೋ, ಕಾರು, ಜೀಪು, ಟ್ರಾಕ್ಟರ್ ಮತ್ತು ಲಾರಿಗಳನ್ನು ಕಡಿಮೆ ಬಡ್ಡಿದರದಲ್ಲಿ ಕೊಡಿಸಬೇಕು. ಮುಖ್ಯವಾದ ವಿಷಯವೆಂದರೆ ಅವರಿಗೆ ಕೊಡತಕ್ಕ ಎಲ್ಲಾ ಸಾಲ ಸೌಲಭ್ಯಗಳಿಗೆ ಆಸ್ತಿ ಅಡುವುಗಳ ಆಧಾರವಿರಬೇಕೆಂಬ ನೀತಿ ಇರಕೂಡದು. ಅವರಿಗೆ ನೀಡುವ ವಾಹನ ಇತರೆಗಳನ್ನು ಆಧಾರವಾಗಿ ಮಾಡಿಕೊಳ್ಳಬಹುದು.

೩. ಸಣ್ಣ ಸಣ್ಣ ರೈತ ಕುಟುಂಬಗಳಿಗೆ ಎತ್ತು, ಚಕ್ಕಡಿ, ಗೊಬ್ಬರ, ವ್ಯವಸಾಯ ಉಪಕರಣಗಳನ್ನು ಉಚಿತವಾಗಿ ನೀಡಬೇಕಲ್ಲದೆ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳಿಗೆ ಗಂಗಾಕಲ್ಯಾಣ ಯೋಜನೆ ಅಡಿಯಲ್ಲಿ ಕೊಳವೆ ಬಾವಿಗಳನ್ನು ಹಾಕಿಸಿಕೊಡಬೇಕು.

೪. ಸಣ್ಣ ಸಣ್ಣ ವ್ಯಾಪಾರ ಮಾಡಲು ಕನಿಷ್ಟ ೨೫ ಸಾವಿರ ರೂಪಾಯಿಯವರೆಗೆ ಅರ್ಧದಷ್ಟು ಸಹಾಯಧನದೊಂದಿಗೆ ಸರ್ಕಾರದ ನೀತಿ ಶೇ. ೪ರ ಬಡ್ಡಿದರದಲ್ಲಿ ಜಾಮೀನು ರಹಿತ ಸಾಲ ನೀಡಬೇಕು. ಇಲ್ಲಿ ಒಂದು ಮುಖ್ಯ ಮಾತು ಸಾಲಕ್ಕಾಗಿ ಅರ್ಜಿ ಹಾಕಲು ಇಂತಹ ಸಮುದಾಯದವರಿಗೆ ಬ್ಯಾಂಕುಗಳ ಕಡೆ ಕೈ ತೋರಿಸುವುದು ಸರಿಯಲ್ಲ. ಬ್ಯಾಂಕಿವನರು ಇವರನ್ನು ಒಳಗೆ ಕೂಡ ಬಿಟ್ಟುಕೊಳ್ಳುವುದಿಲ್ಲ. ಸರ್ಕಾರವೇ ನೇರ ಸಾಲದ ವ್ಯವಸ್ಥೆ ಮಾಡಬೇಕು.

೫. ಈ ಸಮುದಾಯದ ಸಮೀಕ್ಷೆ ವರದಿ ಆಧಾರದ ಮೇಲೆ ಸರ್ಕಾರ ಮೊದಲು ಅರ್ಹಮತದಾರರ ಪಟ್ಟಿ ರಚಿಸಬೇಕು ಮತ್ತು ಎಲ್ಲ ಅರ್ಹ ಕುಟುಂಬಗಳಿಗೆ ಬಿಪಿಎಲ್ ಪಡಿತರ ಚೀಟಿಗಳನ್ನು ನೀಡಬೇಕು. ಗುಂಪು ಮನೆಗಳು, ಗುಂಪು ವಿಮೆಯೋಜನೆ ಮತ್ತು ಆರೋಗ್ಯ ತಪಾಸಣೆಯ ವ್ಯವಸ್ಥೆಯು ಈ ಸಮುದಾಯಕ್ಕೆ ಅನ್ವಯಿಸಬೇಕು.

೬. ಸಮುದಾಯದಲ್ಲಿರುವ ವೃದ್ಧರು, ವಿಧವೆಯರು, ಅಂಗವಿಕಲರು ಹಾಗೂ ಬಾಣಂತಿಯರು ಇವರಿಗೆ ವೇತನ ನೀಡುವಲ್ಲಿ ಕೆಲವು ಕರಾರುಗಳನ್ನು ಮುಂದೆ ಮಾಡಿ ತಪ್ಪಿಸಿದ ಪ್ರಸಂಗಗಳೇ ಇವೆ. ಮಕ್ಕಳಿದ್ದರೆ ಕೊಡುವುದಿಲ್ಲ, ಅದರಿಂದ ಈ ತೊಂದರೆಯಾಗಿದೆ. ಇದ್ದ ಮಕ್ಕಳೂ ಭಿಕ್ಷಾಟನೆ ಮಾಡಿಯೇ ಹೊಟ್ಟೆ ತುಂಬಿಸಿಕೊಳ್ಳುವುದೇ ಆಗಿರುವುದರಿಂದ ಈ ವೃದ್ಧರು, ವಿಧವೆಯರು, ಅಂಗವಿಕಲರು ಯಾವ ಸಂಪತ್ತು ಅನುಭವಿಸುತ್ತಾರೆಂದು ಇವರ ವೇತನ ಮಂಜೂರು ಮಾಡದೆ ಸಂಬಂಧಿಸಿದ ಅಧಿಕಾರಿಗಳು ಕಾನೂನು ತೋರಿಸುತ್ತಾರೆ. ಕಾರಣ ಈ ಸಮುದಾಯದವರಿಗೆ ಯಾವ ಕಾನೂನು ಮುಂದುಮಾಡದೆ ವೇತನದ ಸೌಲಭ್ಯ ನೀಡಬೇಕು.

೭. ಈ ಸಮುದಾಯವರು ವಾಸ ಮಾಡುವ ಸ್ಥಳಗಳಲ್ಲಿ ಶಿಕ್ಷಣ ಇಲಾಖೆ ಪ್ರತಿವರ್ಷ ಮಕ್ಕಳ ಗಣತಿ ಮಾಡುವಾಗ ಈ ಸಮುದಾಯದ ಮಕ್ಕಳ ಗಣತಿಯನ್ನು ಕಡ್ಡಾಯವಾಗಿ ಮಾಡಬೇಕು. ಈ ಸಮುದಾಯದ ಮಕ್ಕಳಿಗೆ ಅವರ ಸ್ಥಳದಲ್ಲಿಯೇ ಅಂಗನವಾಡಿ ಕೇಂದ್ರಗಳನ್ನು ಸ್ಥಾಪಿಸಬೇಕು.

